೧೬೭

ಪ್ರಚಾರ ಪುಸ್ತಕ ಮಾಲೆ

# ನಿಮ್ಮ ಮಗು

ಡಾ. ಎಂ.ವಿ. ನರಸಿಂಹಯ್ಯ



# ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯಿ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ

ಪ್ರಚಾರ ಪುಸ್ತಕಮಾಲೆ–೨೬೭

# ನಿಮ್ಮ ಮಗು

ಡಾ. ಎಂ. ವಿ. ನರಸಿಂಹಯ್ಯ




೧೯೯೮

ಮೊದಲನೆಯ ಮುದ್ರಣ: ೧೯೯೮

೫೦೦೦ ಪ್ರತಿಗಳು



ಪ್ರಸಾರಾಂಗದ ಪತ್ರದ ಕ್ರಮ ಸಂಖ್ಯೆ : ಪ್ರ ೫/೫೩೧೦/೯೭–೯೮

೧೯–೧೧–೧೯೯೭

ಬೆಲೆ: ರೂ. ೨–೦೦

ಪ್ರಕಾಶಕರು

ಡಾ. ಅರವಿಂದ ಮಾಲಗತ್ತಿ

ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ

ಮೈಸೂರು - ೫೭೦೦೦೬

ಮುದ್ರಕರು

ಶ್ರೀ ಬಿ. ಎಸ್. ಸಿದ್ದೇಗೌಡ

ನಿರ್ದೇಶಕರು

ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ

ಮೈಸೂರು - ೫೭೦೦೦೬

# ಮುನ್ನುಡಿ

ವಿಶ್ವವಿದ್ಯಾನಿಲಯದ ವಿದ್ವತ್ತು ನಗರಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪಸರಿಸಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕೆಂಬ ಉದ್ದೇಶದಿಂದ ನಮ್ಮ ಪ್ರಸಾರಾಂಗ, ನಾಡಿನ ಉದ್ದಗಲಕ್ಕೂ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ಜ್ಞಾನದ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಮಾಹಿತಿ ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತವಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದ-ಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ. ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ

ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿ
ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡ
ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ
ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿ
ವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್
ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತ ಇನ್ನೂ
ಅರವತ್ತಾರು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲ
ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರ ಬೀಳುತ್ತಿರುವ ಡಾ. ಎಂ. ವಿ
ನರಸಿಂಹಯ್ಯ ಅವರ "ನಿಮ್ಮ ಮಗು" ಪುಸ್ತಕವು ಹೆಚ್ಚು
ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಪ್ರೊ. ಎಸ್. ಎನ್. ಹೆಗ್ಗ

ಕುಲಪತಿಗಳು

# ಪ್ರಕಾಶಕರ ಪ್ರಸ್ತಾವನೆ

ಮಕ್ಕಳಿಲ್ಲದಿದ್ದರೆ ಮನೆಯೇ ಅಲ್ಲ, ಮಕ್ಕಳೇ ಮನೆಗೆ ಮಾಣಿಕ್ಯ, ಮಕ್ಕಳೇ ಸರ್ವಸ್ವ ಎಂದೆಲ್ಲಾ ಹೇಳುವುದಿದೆ. ಮಕ್ಕಳ ಬಗ್ಗೆ ಜನಪದರಲ್ಲಿ ಹೇರಳವಾದ ಸಾಹಿತ್ಯವಿದೆ. ಅದನ್ನೆಲ್ಲಾ ಸ್ಮರಿಸಿಕೊಂಡರೆ ಅದೆಲ್ಲದರ ಬಗ್ಗೆಯೂ ಇಲ್ಲಿ ದಾಖಲಿಸಬೇಕೆನಿಸುತ್ತದೆ. ಈ ಮಕ್ಕಳ ಬಯಕೆಗೆ ಅಲ್ಲಿಯ ಸಾಹಿತ್ಯದ ಸತ್ವವೇ ಕಾರಣ. ಇನ್ನೊಂದು ನೆಲೆಯಲ್ಲಿ ಅದೆಲ್ಲ ವಾಸ್ತವದ ಬದುಕಿನಲ್ಲಿ ಯಥಾವತ್ತಾಗಿರುವುದೂ ಕಾರಣ ವಾಗಿದೆ. ಬಂಜೆ ಎನಿಸಿಕೊಂಡು ಯಾವ ಹೆಣ್ಣು ಮಣ್ಣು ಸೇರಬಯಸುತ್ತಾಳೆ?

> ಬಂಜೆಯಾ ಮನಿ ಮುಂದ ಅಂಜೂರಿ ಗಿಡಹುಟ್ಟಿ
> ಟೊಂಗೆ ಟೊಂಗೆಲ್ಲ ಗಿಣಿ ಕುಂತು ನುಡಿದಾವೆ
> ಬಂಜೆ ನಿನ ಬದುಕು ಹೆರವರಿಗೆ

ಸ್ತ್ರೀವಾದಿ ನೆಲೆಯಿಂದ ಇಲ್ಲಿಯ ವಿಚಾರಗಳನ್ನು ಒಪ್ಪದೆ ಹೋದರೂ ಕೆಲ ಕಟು ಸತ್ಯದ ಸಂಗತಿಗಳಿವೆ ಎನ್ನುವುದನ್ನು ಮರೆಯಲಾಗದು. ಆದರೆ ಹತ್ತು ಹೆತ್ತವಳೇನು ಬಲ್ಲಳು ಬಂಜೆಯ ನೋವು? ಅವಳ ನೋವು ಮಾತೃತ್ವದ ನೋವಿಗಿಂತ ಮಿಗಿಲಾದುದು ಎನಿಸುತ್ತದೆ. ಅದೇ 'ತಾಯಿ' ಎನ್ನುವ ಶಬ್ದ 'ಮಗು' ವಿನಿಂದ ಹೊರತಾದುದಲ್ಲ. ಹೀಗಾಗಿ 'ಮನೆಯೇ ಮೊದಲ ಪಾಠಶಾಲೆ; ತಾಯಿಯೇ ಮೊದಲ ಗುರು' ಎನ್ನುವಂತೆ 'ಮನೆಯೇ ಮೊದಲ ಆರೋಗ್ಯ ಕೇಂದ್ರ, ಮಾತೆಯೇ ಮನೆಯ ಮೊದಲ ವೈದ್ಯ' ಎಂದೂ ಹೇಳಬಹುದು. ಮಾತೆ ಮನಶಾಸ್ತ್ರಜ್ಞಳೂ ಹೌದು, ರೋಗ ತಜ್ಞಳೂ ಹೌದು.

ಮಗುವಿನ ಅಳು ಮತ್ತು ನಗುವಿನ ಕಾರಣಗಳನ್ನು ಹೆಕ್ಕಿ ಹುಡುಕಿ ಹೇಳಬಲ್ಲಳು. ಬಹುಶಃ ಈ ಸೌಭಾಗ್ಯ ಓವರ್ ಹಾಲ ಕೊಡುವ ತಾಯಿಗೆ ಸಿಗಲಿಕ್ಕಿಲ್ಲವೇನೋ ?

'ಅತ್ತಾರೆ ಅಳಲೆವ್ವ ಈ ಕೂಸು ನನಗಿರಲಿ'

'ನಕ್ಕಾರೆ ನನಕೂಸು ನಗುವೊಗದ ಕ್ಯಾದಿಗೆ'

ಹೀಗೆ ತಾಯಿ ಮಗುವಿನ ಅಳು–ನಗು ಎರಡನ್ನೂ ಸ್ವಾಗ ಸುವಳು. ಆ ಮಗುವಿನ ಸಂಭ್ರಮವನ್ನು ವರ್ಣಿಸುವ ರೀತಿಯೂ ಅಗಾಧವಾದುದು. ಆಕೆಯ ಕಂದ 'ಒಳ ಹೊ ಆಡಿದರ ಸನ್ಯಾಸಿ ಜಪವ ಮರೆತನಂತೆ', 'ಕಂದನ ಕಣ್ಣೋಟ ಶಿವನ ಕೈಯಲಗು ಹೊಳೆವಂತೆ' ಹೊಳೆಯುವುದಂತೆ!

ಮಕ್ಕಳು ದೇವರ ರೂಪ, ಮನೆಯ ದೀಪ. ಮಕ್ಕಳು ಮಂದಾರ ಕುಸುಮಗಳು. ಈ ಮಕ್ಕಳ ಎಳೆ ನಗೆಯಲ್ಲಿಯೇ ಅರಳುವ ದ್ರವವಿದೆ, ಅಳುವಿನಲ್ಲಿ ಬೇಡಿಕೆಯ ಬಲವಿದೆ. ಇಂಥ ಮಕ್ಕಳ ಮನಸ್ಥಿತಿಯನ್ನು ಅರಿಯಲು ಇಂದಿನ ಆಧುನೀಕರಣದ ನಾಗರಿಕ ಬದುಕಿನಲ್ಲಿ ಸಮಯವಿಲ್ಲ, ಸಂಯಮವಿಲ್ಲ. ಪುಸ್ತಕ ಓದಿ ಅಡುಗೆ ಮಾಡುವ ಪರಂಪರೆಗೆ ನಾವು ಸೇರುತ್ತಿದ್ದೇವೆ. ಅಂತೆಯೇ ಮಕ್ಕಳ ಮನೋವೇದನೆ, ಮನೋಲ್ಲಾಸ ತಿಳಿಯುವ ಸ್ಥಿತಿ ಹೇಗೆ? ಇದರರ್ಥ ಓದಿ ತಿಳಿಯಬಾರದೆಂದಲ್ಲ. ಬದುಕಿನ ಪರಿವರ್ತನೆಯ ಗತಿಯನ್ನು ಅವಲೋಕಿಸುವುದರೊಂದಿಗೆ ಅನುಸರಿಸುವುದೂ ಅನಿವಾರ್ಯ. ಕಾಲ ನಿಲ್ಲುವುದಿಲ್ಲ. ಹೀಗಾಗಿ ನಾವು ಆ ಗತಕಾಲಕ್ಕೆ ಕಾಯುವ ಹಾಗಿಲ್ಲ.

'ವೃತ್ತ ಆವರ್ತನದ ಗತಿ ತಪ್ಪದು
ತಪ್ಪಿದರೆ ವೃತ್ತವಾಗುಳಿಯದು'

ಪುಸ್ತಕವು ಒಂದು ಮಗುವಿದ್ದ ಹಾಗೆ. ಅದನ್ನು ಮಗುವಿನಂತೆ ಮುದ್ದಿಸಬೇಕು. ಆದರೆ ಶೋಧಕ ವೈದ್ಯನಿಗೆ ಮಗುವೇ ಒಂದು ಪುಸ್ತಕವಾಗುತ್ತದೆ. ಪುಸ್ತಕ ಪ್ರಪಂಚವೇ ಆಗುತ್ತದೆ. ಕೆದಕಿದಷ್ಟು ಕುತೂಹಲ. ನೆಮ್ಮದಿಗೆ ಕೊನೆಯೇ ಇಲ್ಲ. ಡಾ. ಎಂ. ವಿ. ನರಸಿಂಹಯ್ಯ ಅವರು ಮಕ್ಕಳ ಮನವೆಂಬ ಕಡಲನ್ನು ಮಥಿಸಿ ಬೆಣ್ಣೆಯನ್ನು ತೆಗೆದು ಕೆಲವು ಬೆಣ್ಣೆಯುಂಡೆಗಳನ್ನು ಸಂಕಲಿಸಿ 'ನಿಮ್ಮ ಮಗು' ಎಂದು ನಮ್ಮ–ನಿಮ್ಮ ಮಡಿಲಿಗೆ ಹಾಕಿದ್ದಾರೆ.

"ನಿಮ್ಮ ಮಗು" ಎಂಬುದು ಮಕ್ಕಳನ್ನು ಕುರಿತು ರಚಿತವಾದ ಚಿಕ್ಕ ಆದರೆ ಚೊಕ್ಕವಾದ ಕೃತಿ. ನಗುವ ಮಗು ಮಡಿಲು ತುಂಬುವಂತೆ ಮಗುವಿನ ಹಿತದಿಂದಲೂ, ತಾಯಿತನದ ದೃಷ್ಟಿಯಿಂದಲೂ ಈ ಕೃತಿ ಮಾತಾ–ಪಿತರ ಕೈತುಂಬಿದರೆ ಹೆಚ್ಚು ಕ್ಷೇಮ! ಇಂತಹ ಒಂದು ಉತ್ತಮ ಕೃತಿಯನ್ನು ಪ್ರಸಾರಾಂಗದ ಮೂಲಕ ಪ್ರಕಟಿಸಲು ಅನುಮತಿ ನೀಡಿದ್ದಕ್ಕೆ ಮೊದಲು ಡಾ. ಎಂ. ವಿ. ನರಸಿಂಹಯ್ಯ ಅವರಿಗೆ ಸ್ಮರಿಸುತ್ತೇನೆ.

ಡಾ. ನರಸಿಂಹಯ್ಯನವರು ಚಿಕಿತ್ಸಕ ದೃಷ್ಟಿಯಿಂದ, ಸಂಶೋಧನಾ ಮನೋಭಾವದಿಂದ ಮಗುವಿನ ಅಳುವಿಗೆ ಹದನವೇನೆಂಬುದನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ತಿಳಿಸಿಕೊಡುತ್ತಾರೆ. ಸುಮಾರು ಐವತ್ತಕ್ಕೂ ಹೆಚ್ಚು ಕಾರಣಗಳನ್ನು ಪಟ್ಟಿ ಮಾಡುತ್ತಾರೆ.

ಡಾ. ನರಸಿಂಹಯ್ಯನವರು ನುರಿತ ವೈದ್ಯರು ಮಕ್ಕಳ ಮನೋಭೂಮಿಕೆಯನ್ನು ಆಳವಾಗಿ ಅಭ್ಯಾಸ ಮಾಡಿದವರು. ಅಳುವಿನ ಬಗ್ಗೆ ಮಾತ್ರವಲ್ಲ, ಮಗುವನ್ನು ಬೆಳೆಸುವ ಬಗ್ಗೆಯೂ ನಮಗೆ ಮಾರ್ಗದರ್ಶನ ಮಾಡಿಸುತ್ತಾರೆ. ಮಗುವಿನ ಬೆಳವಣಿಗೆಯಲ್ಲಿ ತಂದೆ–ತಾಯಿಗಳ, ಕುಟುಂಬದ, ಶಾಲೆ, ಸಮಾಜದ

ಪಾತ್ರವೇನು ಎಂಬ ಬಗ್ಗೆ ಅರಿವು ಮಾಡಿಸುತ್ತಾರೆ. ಜಡ್ಡಿಗೆ ಮದ್ದನ್ನು ಸೂಚಿಸುತ್ತಾರೆ. "Child is a Father of a Man" ಎಂಬ ಹೆಗ್ಗಳಿಕೆಯನ್ನರಿತು ಎಲ್ಲರೂ ವಹಿಸಬೇಕಾದ ಕಾಳಜಿಯ ಬಗೆಗೆ ಒತ್ತು ನೀಡುತ್ತಾರೆ.

ನಮ್ಮ ಪ್ರಸಾರಾಂಗದ ಕಾರ್ಯ ಚಟುವಟಿಕೆಗಳು ಯಶಸ್ವಿಯಾಗಿ ನಡೆಯಲು ಕುಲಪತಿಗಳಾದ ಡಾ. ಎಸ್. ಎನ್. ಹೆಗ್ಡೆಯವರು ನೀಡುತ್ತಿರುವ ಪ್ರೋತ್ಸಾಹವೇ ಕಾರಣ. ಅವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ಆಡಳಿತವೆಂದಮೇಲೆ ಅಡೆ-ತಡೆಗಳು ಇದ್ದೇ ಇರುತ್ತವೆ-ನಾವು ಕೊಡುವ ತೊಂದರೆಗಳನ್ನು ಸಹಿಸಿಕೊಂಡು ನಗುನಗುತ್ತಲೇ ನಮ್ಮ ಕೆಲಸಗಳು ಸುಗಮವಾಗಿ ನಡೆಯಲು ಅನುವು ಮಾಡಿ ಕೊಡುತ್ತಿರುವ ಕುಲಸಚಿವರಾದ ಪ್ರೊ. ವಿ. ಜಿ. ತಳವಾರ್ ಅವರಿಗೂ ನನ್ನ ವಂದನೆಗಳು. ನಮ್ಮ ಪ್ರಕಟಣೆಗಳನ್ನು ಸುಗಮವಾಗಿ ಮುದ್ರಿಸಿ ಕೊಡುತ್ತಿರುವ ವಿಶ್ವವಿದ್ಯಾನಿಲಯದ ಅಚ್ಚುಕೂಟದ ನಿರ್ದೇಶಕರಾದ ಶ್ರೀ ಬಿ. ಎಸ್. ಸಿದ್ದೇಗೌಡ ಅವರಿಗೂ ವಂದನೆಗಳು. ಪ್ರಸಾರಾಂಗದ ಕಾರ್ಯ ಚಟುವಟಿಕೆಗಳನ್ನು ತುಂಬು ಆಸ್ಥೆಯಿಂದ ನಿರ್ವಹಿಸುತ್ತಿರುವ ಉಪನಿರ್ದೇಶಕರಾದ ಶ್ರೀ ಡಿ. ಕೆ. ಈರೇಗೌಡ ಮತ್ತು ಬಳಗದವರಿಗೂ ನನ್ನ ವಂದನೆಗಳು.

ಡಾ. ಅರವಿಂದ ಮಾಲಗತ್ತಿ

ನಿರ್ದೇಶಕ

# ಅರಿಕೆ

ಇಂದು ನಮ್ಮ ದೇಶದ ಜನಸಂಖ್ಯೆ ೯೬ ಕೋಟಿ. ಇವರಲ್ಲಿ ೧೪ ವರ್ಷದ ಒಳಗಿನ ಮಕ್ಕಳು ಶೇ. ೪೨.೫ ರಷ್ಟು ಇದ್ದಾರೆ. ೫ ವರ್ಷದ ಹುಟ್ಟುಹಬ್ಬ ಆಚರಿಸುವಷ್ಟರಲ್ಲಿ ಶೇ ೨೫ ರಷ್ಟು ಮಕ್ಕಳು ಸಾವನ್ನು ಅಪ್ಪುತ್ತಾರೆ. "ಮಕ್ಕಳೇ ನಾಡಿನ ನಂದಾ ದೀಪ" ಎಂಬ ನಾಣ್ನುಡಿ ಇದೆ. ನಾಡಿನಲ್ಲಿ ಈ ಮಕ್ಕಳ ಭಾಗ್ಯ ಎಲ್ಲರಿಗೂ ದೊರೆತಿಲ್ಲ. ಮಕ್ಕಳನ್ನು ಪಡೆದ ಪೋಷಕರಿಗೆ ಅವರ ಪಾಲನೆಯ ಜವಾಬ್ದಾರಿ ಮತ್ತು ಕರ್ತವ್ಯಗಳ ಭಾರ ಅತಿ ಆಗಿದೆ. ಮಕ್ಕಳಿಲ್ಲದ ತಾಯಿ–ತಂದೆಯರಿಗೆ "ಇಲ್ಲ" ವೆಂಬುದು ಒಂದೇ ಚಿಂತೆಯಾದರೆ, ಮಕ್ಕಳಿರುವವರಿಗೆ ಹತ್ತಾರು ಚಿಂತೆಗಳು ಕಾಡುತ್ತವೆ. "ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು." ಆದ್ದರಿಂದ ನಮ್ಮ ಮಗು ವಿದ್ಯಾವಂತ, ಬುದ್ಧಿವಂತ ಹಾಗೂ ಉತ್ತಮ ಪ್ರಜೆಯನ್ನಾಗಿ ಮಾಡಲು "ಬೆಳೆಯುವ ಪೈರು ಮೊಳಕೆಯಲ್ಲೇ" ಕಾಣುವಂತೆ ಪ್ರಾರಂಭದಿಂದಲೇ ಮಕ್ಕಳ ಪಾಲನೆಯಲ್ಲಿ ಶ್ರದ್ಧೆವಹಿಸಿ, ಶಿಸ್ತಿನಿಂದ ಬೆಳಸಿ, ಬೆಳವಣಿಗೆಗೆ ಬೇಕಾದ ಪೌಷ್ಟಿಕ ಆಹಾರ, ರೋಗ ನಿರೋಧಕ ರಕ್ಷೆ ನೀಡಿ ಅವರ ಆರೋಗ್ಯ ಕಾಪಾಡುವುದಲ್ಲದೆ ಒಳ್ಳೆಯ ಪರಿಸರದಲ್ಲಿ ಬೆಳೆದು ಬಾಳಲು ಮಾರ್ಗದರ್ಶನ ನೀಡುವ ಮತ್ತು ಬೇಕಾದ ಸಕಲ ಸೌಲಭ್ಯಗಳನ್ನು ಸಕಾಲದಲ್ಲಿ ಒದಗಿಸಬೇಕಾದದ್ದು ಕುಟುಂಬದ, ಶಾಲೆಯ, ಸಮಾಜದ ಹಾಗೂ ದೇಶದ ಕರ್ತವ್ಯವಾದರೆ ಅವುಗಳನ್ನು ಪಡೆಯುವ ಹಕ್ಕು ಮಕ್ಕಳದ್ದಾಗಿದೆ.

ಈ ನಿಟ್ಟಿನಲ್ಲಿ "ನಿಮ್ಮ ಮಗು" ಎಂಬ ಕಿರುಹೊತ್ತಿಗೆಯನ್ನು ಬರೆಯಲು ಸ್ಫೂರ್ತಿ ತುಂಬಿದ ಶ್ರೀ ಜಿ. ಎಸ್. ಭಟ್

ಅವರಿಗೂ, ನನ್ನ ವೈದ್ಯ ವೃತ್ತಿಯ ಸೇವಾ ಅವಧಿಯಲ್ಲಿ ನಡೆ
ಸಭೆ–ಸಮಾರಂಭಗಳಲ್ಲಿ ನಾನು ಪಾಲ್ಗೊಳ್ಳಲು ಉತ್ತೇಜನ ನೀ
ಕಿರು ಲೇಖಕ ಹಾಗೂ ಭಾಷಣಕಾರನಾಗಲು ಪ್ರೋತ್ಸಾಹಿಸಿ
ಪೂಜ್ಯ ಗುರು ಡಾ. ಕೆ. ಅಂಕೇಗೌಡ (ಮಕ್ಕಳ ತಜ್ಞರು
ಅವರಿಗೂ ಹಾಗೂ ಬಾಳಿನಲ್ಲಿ ಆಶ್ರಯ ನೀಡಿ ಆಶೀರ್ವದಿಸಿ
ಹಿರಿಯರಿಗೂ, ಲೇಖನಗಳನ್ನು ಪರಿಷ್ಕರಿಸಿ ಸಹಾಯ ಹಸ್ತ ನೀಡಿ
ಸಹಕರಿಸಿದ ಡಾ. ಅಕ್ಕಮಹಾದೇವಿ ಮತ್ತು ಶ್ರೀಮತಿ ಉಷಾ
ದೇವಿ ಅವರಿಗೂ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ

ಈ ಆರೋಗ್ಯ ಮತ್ತು ಆರೈಕೆಯ ಕೈಪಿಡಿಯನ್ನು ಮುದ್ರಿಸಿ
ಪ್ರಕಟಿಸಲು ಒಪ್ಪಿದ ಮೈಸೂರು ವಿಶ್ವವಿದ್ಯಾನಿಲಯದ
ಪ್ರಸಾರಾಂಗದ ನಿರ್ದೇಶಕರೂ ಡಾ. ಅಂಬೇಡ್ಕರ್ ಫೆಲೋಶಿಪ್
ವಿಜೇತರೂ ಆದ ಡಾ. ಅರವಿಂದ ಮಾಲಗತ್ತಿ ಅವರಿಗೂ ನನ್ನ
ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನನ್ನ ವ್ಯಾಸಂಗದಲ್ಲಿ, ವೈದ್ಯವೃತ್ತಿಯಲ್ಲಿ ಲೇಖನಗಳನ್ನು
ಬರೆಯುವಲ್ಲಿ, ವಿಷಯ ಸಂಗ್ರಹಣೆಯಲ್ಲಿ ಯಾವ ಅಡಚಣೆಗಳಿಗೂ
ಅವಕಾಶ ನೀಡದೆ ಸಹಕರಿಸಿದ ನೆಚ್ಚಿನ ಸತಿ ಶ್ರೀಮತಿ ಸುಶೀಲಮ್ಮ
ಮಕ್ಕಳಾದ ರವಿ ಹಾಗೂ ಶ್ರೀನಂದ ಅವರಿಗೂ ನಾನು ಆಭಾರಿ
ಯಾಗಿರುತ್ತೇನೆ.

ಈ "ನಿಮ್ಮ ಮಗು" ಪುಸ್ತಕವನ್ನು ಸಾರ್ವಜನಿಕರು
ಓದಿ, ದೊರೆತ ಅಂಶಗಳನ್ನು ಅರಿತು ತಮ್ಮ ಮಕ್ಕಳ ಆರೋಗ್ಯ
ಮತ್ತು ಆರೈಕೆಯ ಅಭಿವೃದ್ಧಿಯಲ್ಲಿ ಅನುಸರಿಸಿ ಸದುಪಯೋಗ
ಮಾಡಿಕೊಂಡರೆ ಆಗ ನಾನು ಸಮಾಜದ, ಪೋಷಕರ ಮತ್ತು

ಮಕ್ಕಳ ಏಳಿಗೆಗೆ ಅಳಿಲುಸೇವೆ ಸಲ್ಲಿಸಲು ಪಟ್ಟ ಶ್ರಮಕ್ಕೆ ಸಂದ ಫಲಾಮೃತನೆಂದೂ ಹಾಗೂ ನನ್ನ ಮುಂದಿನ ಲೇಖನಗಳಿಗೆ ದೊರೆತ ಸ್ಫೂರ್ತಿಯ ದಾರಿ ದೀಪವೆಂದೂ ನಂಬಿರುತ್ತೇನೆ. ಅನೇಕ ಗ್ರಂಥಗಳನ್ನು ಓದಿ ಅವುಗಳಿಂದ ಪಡೆದ ಅಂಶಗಳನ್ನು ಈ ಪುಸ್ತಕದಲ್ಲಿ ಬರೆದಿರುತ್ತೇನೆ. ಆ ಎಲ್ಲಾ ಗ್ರಂಥಕರ್ತರಿಗೂ ನಾನು ಪಡೆದು, ಬಳಸಿದ ಜ್ಞಾನಕ್ಕೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಡಾ. ಎಂ. ವಿ. ನರಸಿಂಹಯ್ಯ

# ಪರಿವಿಡಿ

# ೧. ಅಳುವ ಮಗು

## ೧. ಯಾವ ಮಗು ಅಳುವುದಿಲ್ಲ ಯಾರು ಈ ಸಮಸ್ಯೆ ಎದುರಿಸುತ್ತಿಲ್ಲ

ಮಕ್ಕಳು ನಗುವ ಮೊದಲೇ ಅಳುತ್ತವೆ. ನಗುವುದು ಅಳ ಬಾರದೆಂದೇ ಆದರೂ ಹುಟ್ಟಿದ ಎಲ್ಲಾ ಮಕ್ಕಳು ಕೂಡಲೆ ಅಳುವುವು. ಅಳುವಿಗೆ ಕಾರಣಗಳು ಅನೇಕ. ತಾಯಿಯ ಗರ್ಭದಲ್ಲಿ ನೆಮ್ಮದಿ, ನಿಶ್ಚಿಂತೆಯಿಂದ ಇದ್ದೆ ಈಗ ಯಾವ ಕಷ್ಟ ಕಾದಿದೆಯೋ ಎಂದು ಅಳಬಹುದು. ಬದಲಾದ ಪರಿಸರದ ಭಯ ಬೆಳೆಯಲು ಬೇಕಾದ ಆವಶ್ಯಕತೆಗಳ ಬೇಡಿಕೆ, ಬದುಕಿನಲ್ಲಿ ಅಡ್ಡ ಬರುವ ಅಡೆತಡೆಗಳಿಂದ ನೊಂದ ಮತ್ತು ಸೌಲಭ್ಯಗಳ ಕೊರತೆ ಯಿಂದ ಕೊರಗಿ, ನಿರಾಶೆಯಲ್ಲಿ ಅಂತ್ಯವಾಗುವಾಗಲೂ ಅಳು ವುದು.

ಅಳುವುದು ಕಾಮಾಲೆಯಂತೆ ಕಾಯಿಲೆಯಲ್ಲ. ಆದರೆ ಅದು ಒಂದು ಲಕ್ಷಣ. ಕೆಲವು ಸಾರಿ ಅಳುತ್ತಿರುವ ಮಗುವನ್ನು ನೋಡಲು ಹೋದ ಹೊಸ ವೈದ್ಯರಿಗೂ ಸರಿಯಾದ ಕಾರಣ ತಿಳಿಯದೆ ಬೆವರುವುದುಂಟು, ಹಾಗೆಂದು ಅಳುವನ್ನು ಕಡೆಗಣಿಸು ವುದು ತಪ್ಪು. ರೋಧಿಸಲು ಏನೋ ತೊಂದರೆ ಇರಬೇಕು. ಅದನ್ನು ಅರಿತು ಸೂಕ್ತ ಚಿಕಿತ್ಸೆ ಸಲಹೆ ನೀಡಬೇಕು. ಇಲ್ಲ ವಾದರೆ ಮಗುವಿನ ಪ್ರಾಣಕ್ಕೆ ಅಪಾಯ. ಮಗುವಿನೊಡನೆ ತಾಯಿ–ತಂದೆಯರು ಅಳಬೇಕಾದ ಪರಿಸ್ಥಿತಿ ಬರಬಹುದು.

ವೈದ್ಯರು ಜಾಣತನದಿಂದ ಅಳುವಿಗೆ ಕಾರಣ ಕಂಡು ಚಿಕಿತ್ಸೆ ನೀಡಿದಾಗ ಅಳುತ್ತಿದ್ದ ಮಗು ಆಡುವುದೇ ಆನಂದ. ಆಗ ತಾಯಿ–ತಂದೆಯರಿಗೂ ಸಂತೋಷ. ನೆಮ್ಮದಿ ಪಡೆದ ವೈದ್ಯರು

ಮತ್ತು ಅವರ ವೃತ್ತಿಗೂ ಗೌರವ ಘನತೆ ಹೆಚ್ಚಾಗುವುದು ಪೋಷಕರು ವೈದ್ಯರನ್ನು ದೇವರೆಂದೇ ಹೊಗಳುವರು.

ಮಗುವಿನ ಅಳುವಿಗೆ ಕಾರಣಗಳು ಬಹಳ. ಹಸುಗೂಸ ಎಳೆಗೂಸುಗಳಿಂದ ಪ್ರಾರಂಭವಾಗುವ ಅಳುವು ಮಕ್ಕಳಷ್ಟೇ ಅಲ್ಲ, ದೊಡ್ಡವರನ್ನೂ ಬಾಳಿನ ಕೊನೆಯ ತನಕ ಕಾಡುವುದು. ರಾತ್ರಿ ವೇಳೆ ಮಗುವಿನ ಅಳುವು ಮನೆಯಲ್ಲಿರುವವರ ಮನಸ್ಸ ಕದಡುವುದಲ್ಲದೆ ನೆರೆಹೊರೆಯವರ ನಿದ್ರೆ ಮತ್ತು ನೆಮ್ಮದಿಯನ್ನು ಕೆಡಿಸುತ್ತದೆ.

ಮಗುವಿನ ಹೆರಿಗೆ ಮನೆಯಲ್ಲಿ ಅಥವಾ ಆಸ್ಪತ್ರೆಯಲ್ಲಿ ಆಗಲಿ ಮಗು ಹುಟ್ಟಿದ ತಕ್ಷಣ ಅಳುವುದು. ಇದಕ್ಕೆ ಅನೇಕ ಕಾರಣ ಗಳಿವೆ.

೧. ಒಂಬತ್ತು ತಿಂಗಳು ತಾಯಿಯ ಗರ್ಭದಲ್ಲಿದ್ದು ದೊರೆತ ಪೌಷ್ಟಿಕಾಂಶಗಳಿಂದ ಬೆಳೆದ ಶಿಶುವು ಹೊರಗೆ ಬಂದೊಡನೆ ಅದು ಪರಿಸರದ ಬದಲಾವಣೆಗಳಿಂದ ಅಳುವುದು.

೨. ಕಣ್ಣುಗಳನ್ನು ಬಿಟ್ಟಾಗ ಚುಚ್ಚುವ ಪ್ರಕಾಶ ಮಾನವಾದ ಬೆಳಕಿನಿಂದ.

೩. ಹೊರಬಂದ ದೇಹಕ್ಕೆ ಶೀತಗಾಳಿಯಿಂದ ಉಂಟಾದ ವೈನಡುಕದಿಂದಲೂ ಅಳುವುದು.

೪. ಕಿವಿಗೆ ಕೇಳುವ ಕರ್ಕಶ ಶಬ್ದಗಳಿಂದ ಬೆದರಿದ ಶಿಶುವು ಅಳಲು ಆರಂಭಿಸುವುದು.

ಜನಿಸಿದ ಮಗುವನ್ನು ಹೆರಿಗೆ ಸಮಯದಲ್ಲಿ ಉಂಟಾದ ನೋವು, ಕಷ್ಟಗಳು ಅಳುವಂತೆ ಮಾಡಿದರೂ ತಾಯಿ-ತಂದೆ, ಬಂಧುಗಳಿಗೆ ಆ ಅಳುವೇ ಸಂತೋಷ ಉಂಟುಮಾಡುವುದು.

ಅಲ್ಲದೆ "ಬಂಜೆ" ಎಂಬ ಮೂದಲಿಕೆ ಮಾತಿನಿಂದ ಮುಕ್ತರಾದೆ ವೆಂಬ ಆನಂದ. ಆಸ್ಪತ್ರೆಯ ಹೆರಿಗೆ ಕೋಣೆಯಲ್ಲಿ ಕರ್ತವ್ಯ ನಿರತರಾಗಿದ್ದ ದಾದಿ (ನರ್ಸ್) ವೈದ್ಯರಿಗೂ ಸಂತೋಷದ ಸಿಹಿ ಪೋಷಕರಿಂದ ದೊರೆಯುವುದು.

ಒಂದು ವೇಳೆ ಹುಟ್ಟಿದಾಗ ಮಗು ಅಳದಿದ್ದರೆ "ಅಸ್ವಸ್ಥ ತೆಯ" ಸೂಚನೆ ಆಗಿ ಅಲ್ಲಿದ್ದ ಎಲ್ಲರನ್ನೂ ಚುಚ್ಚಿ, ಚೇತರಿಸಿ, ತುರ್ತು ಚಿಕಿತ್ಸೆಯ ಕರ್ತವ್ಯದಲ್ಲಿ ತೊಡಗಿಸುವುದು.

ಶಿಶು ಮತ್ತು ಮಕ್ಕಳು ತಮಗೆ ಬೇಕಾದ್ದನ್ನು ಪಡೆಯಲು ಮತ್ತು ತಮಗೆ ಆಗುತ್ತಿರುವ ಅನಾನುಕೂಲಗಳನ್ನು ಇತರರಿಗೆ ತಿಳಿಸಲು ಉಪಯೋಗಿಸುವ ಸುಲಭ ಮಾರ್ಗವೇ ಅಳು, ಅಂದರೆ ಕೆಲವು ಮಕ್ಕಳು ಅಳಲು.

(ಅ) ದೀಪ ಹಾಕಿದಾಗ ಉಂಟಾಗುವ ಬೆಳಕಿನ ಪ್ರಖರತೆ

(ಆ) ದೀಪ ಆರಿಸಿದಾಗ ಆವರಿಸುವ ಕತ್ತಲೆಯ ಭಯ

ರಾತ್ರಿ ಕತ್ತಲೆಯಲ್ಲಿ ದೊಡ್ಡವರೇ ಹೊರಗೆ ಹೋಗಲು ಹೆದರಿ ಜೊತೆ ಕೇಳುವರು ಎಂದರೆ ಇನ್ನು ಮಕ್ಕಳು ಹೆದರಿ ರಕ್ಷಣೆಯ ಸಹಾಯಕ್ಕೆ ಅಳುವುದು ಸಹಜವೇ.

ಮಗು ಬೆಳೆದಂತೆ ತನ್ನ ಅನಿಸಿಕೆಗಳನ್ನು ತಿಳಿಸಲು ಮತ್ತು ಇತರರ ಗಮನ ಸೆಳೆಯಲು ಅಳುವುದು. ಆಗ ಶಿಶುಗಳ ಅಳು ಗಟ್ಟಿಯಾಗಿ, ಸ್ವಚ್ಛವಾಗಿರುವುದು ಅಲ್ಲದೆ ಅಳುವಾಗ ಕೈ ಕಾಲು ಗಳನ್ನು ಬಲವಾಗಿ ಆಡಿಸುವುದು.

ಮಗುವಿಗೆ ತೊಂದರೆ ಆದಾಗ ಅಳದೆ ಇರುವುದು ಅಥವಾ ಏನೂ ಇಲ್ಲದೆ ಇದ್ದಾಗ ಅನವರತ (ನಿರಂತರವಾಗಿ) ಅಳುವುದು ಒಂದು ಅಸಾಮಾನ್ಯವಾದ ಸ್ಥಿತಿಯೇ.

## ೨. ಅಳುವನ್ನು ಅನುಸರಿಸುವ ಹಲವು ಸಾಮಾನ್ಯ ಸ್ಥಿತಿಗಳು

೧. ಶಿಶುತನದಲ್ಲೇ ಅಲ್ಲ ಬಾಳಿನಲ್ಲೂ ಅಳುವು ಬೇರ್ಪಡಿಸಲಾಗದಂಥದು.

೨. ಕೆಲವು ವಾರಗಳ ನಂತರ ತಾಯಂದಿರು ಮಗುವಿನ ಅಳುವಿಗೆ ಸರಿಯಾದ ಕಾರಣಗಳನ್ನು ತಿಳಿಯುವ ತರಬೇತಿಯೂ ಆಗುವುದು.

೩. ಮೊದಲ ಮೂರು ವಾರಗಳು ಸಾಮಾನ್ಯವಾಗಿ ಮಗು ಅಳುವುದು ಕಡಿಮೆ.

೪. ಮೂರು–ನಾಲ್ಕು ತಿಂಗಳಾದಂತೆ ರಾತ್ರಿಯ ಎಚ್ಚರ ಮತ್ತು ಅಳುವುದು ಕಡಿಮೆ. ಆದರೆ ಬೆಳಗಿನಲ್ಲಿ ಅಳುವುದುಂಟು.

೫. ಮಗುವಿನ ಅಳು ಮುಂದಿನ ಮಾತು ಕಲಿಯಲು ಮೂಲ ಪದವೂ ಆಗುವುದು.

೬. ಮಗು ಹೆಚ್ಚು ಮಾತು ಕಲಿತಂತೆ ಕ್ರಮೇಣ ಅಳುವು ಕಡಿಮೆಯಾಗುವುದು.

೭. ಸಾಮಾನ್ಯ ಬೆಳವಣಿಗೆಯನ್ನು ಮೀರಿಸುವ ಅಳುವು ಅನವರತವೇ.

## ೩. ಅನವರತ ಅಳುವಿನಿಂದ ಮಗುವಿಗೆ ಆಗುವ ಅನಾಹುತಗಳು

(ಅ) ದೇಹದ ಶಾಖವು ಕಡಿಮೆಯಾಗುವುದು
(ಆ) ಕುಡಿದುದ್ದನ್ನು ಹಿಂದೆಸೆಯುವುದು (Regurgitation)
(ಇ) ತಿಂದದ್ದನ್ನು ವಾಂತಿ ಮಾಡಿಸುವುದು

೪. ರಾತ್ರಿ ವೇಳೆ ನಿದ್ರೆಗೆಟ್ಟು ಎಚ್ಚರವಾಗಿ ಇರಬೇಕಾಗುವುದು.

೫. ಹಾಸಿಗೆಯಲ್ಲೇ ಮೂತ್ರ ಮಾಡುವ ಅಭ್ಯಾಸಬಲ ಆಗುವುದು.

೬. ಪೋಷಕರ ಪೋಷಣೆ ಮುಂದೆ ಮಗುವಿನ ಅಳುವನ್ನು ಒಂದು 'ಚಾಳಿ'ಯನ್ನಾಗಿ ಪರಿಣಮಿಸುವುದು.

೭. ಸತತವಾಗಿ ಅಳುವ ಮಗುವಿನ ಕಣ್ಣು ರೆಪ್ಪೆಗಳು ಊತವಾಗಬಹುದು. ತುಟಿ ಮತ್ತು ಬೆರಳು ಉಗುರುಗಳು ನೀಲಿಯಾಗಿದಲ್ಲಿ ನಡುಗಬಹುದು, ಇದರಿಂದ ತಾಯಿ ತಂದೆಯರಿಗೆ ಗಾಬರಿ ಆಗುವುದು.

೮. ಆರೋಗ್ಯವಂತ ಸಾಮಾನ್ಯ ಮಕ್ಕಳಲ್ಲೂ ಅಳುವಾಗ ಒಮ್ಮೆ "ಸಿಳ್ಳುಧನಿ" ಉಂಟಾಗಬಹುದು. ಆಗ ಮಗುವಿಗೆ ಗಂಟಲು ರೋಗ ಎಂಬ ಗಾಬರಿಯೂ ಆಗುವುದು.

೯. ಚಿಕ್ಕ ಮತ್ತು ಬೆಳೆದ ಮಕ್ಕಳ ಅಳುವಿಗೆ ಸರಿಯಾದ ಕಾರಣ ಇಲ್ಲದಿದ್ದರೂ ಪೋಷಕರು ತಿಳಿಯುವ ಆಸಕ್ತಿ ಹೆಚ್ಚಾಗುವುದು.

## ೪. ಮಗುವಿನ ಅಳುವಿಗೆ ಸಾಮಾನ್ಯ ಕಾರಣಗಳು

೧. ಮಗುವಿಗೆ ಬಲವಂತವಾಗಿ ಆಗಾಗ್ಗೆ ಹಾಲು ಕುಡಿಸುವ ಅಥವಾ ಅನ್ನ ತಿನ್ನಿಸುವ ಸಮಯದಲ್ಲಿ "ಬೇಡ" ಮತ್ತು "ಸಾಕಾಗಿದೆ" ಎಂಬ ಪ್ರತಿಭಟನೆಯ ಸಂಕೇತ ಅಳು ಆಗುವುದು.

೨. ಮೊದಲ ಕೆಲವು ವಾರಗಳು ಮಗುವಿಗೆ ರಾತ್ರಿ ವೇಳೆ ಹಾಲು ಕುಡಿಸಬಾರದೆಂದು ಹಲವರ ಅಭಿಪ್ರಾಯ. ಇದಕ್ಕೆ

ಕಾರಣ ಮುಂದೆ ಮಗು ಅಳುವನ್ನು ಒಂದು ದುರಭ್ಯಾ
ಮಾಡಿಕೊಳ್ಳುವುದೆಂಬ ಭಾವನೆ, ಅದು ಆಹಾರಕ್ಕೆ ಬೇಡಿಕೆಯು
ಆಗಬಹುದು.

೩. ಹಸಿವಿನಿಂದ ಅಳುತ್ತಿರುವ ಮಗುವನ್ನು ತಾಯಿ ಎತ್ತಿ
ಕೊಂಡು ಹಾಲುಣಿಸಿದಾಗ ತಾತ್ಕಾಲಿಕವಾಗಿ ಅಳು
ನಿಲ್ಲುವುದು.

೪. ಎದೆ ಹಾಲು ಕುಡಿಯುವಾಗ ಇದ್ದಕ್ಕಿದ್ದಂತೆ ಮಗುವ
ಅಳುವುದು ಕಾರಣ ಹಾಲು ಉತ್ಪತ್ತಿ ಕಡಿಮೆಯಾಗಿ ಕುಡಿಯಲ
ಸರಿಯಾಗಿ ಹಾಲು ಬಾರದಿರಬಹುದು. ಇಂತಹ ಸಂದರ್ಭದಲ್ಲಿ
ಆಸೆಯಿಂದ ಮಗುವು ಮೊಲೆಯನ್ನು ಹೀರಿ ಹೀರಿ ನಿಶ್ಶಕ್ತ
ವಾಗುವುದು. ಅಲ್ಲದೆ ಸತತವಾಗಿ ಹಾಲು ಕುಡಿಯುವ ಕ್ರಿಯೆ
ಯಲ್ಲಿ ಹೊರಗಿನ ಗಾಳಿಯನ್ನು ಬಾಯಿನ ಮೂಲೆಗಳಿಂದ
ನುಂಗುವುದು, ಇದರಿಂದ ಹೊಟ್ಟೆ ಸೇರಿದ ಗಾಳಿಯಿಂದ ಉಬ್ಬ
ಮತ್ತು ನೋವು ಉಂಟಾಗುವುದು.

೫. ಮೊಲೆ ಹಾಲನ್ನು ಕೆಲವು ಮಕ್ಕಳು ಬೇಗನೆ ಕುಡಿದರೆ
ಮತ್ತೆ ಕೆಲವು ವಿಧಾನವಾಗಿ ಹೀರುತ್ತವೆ, ತಾಯಿ ತನ್ನ
ಕರ್ತವ್ಯ ಭಾರದಿಂದ ಹಾಲು ಕುಡಿಸುವುದನ್ನು ಅವಸರವಾಗಿ
ನಿಲ್ಲಿಸುವರು, ಆಗ "ಅತೃಪ್ತಿ"ಯು ಸೂಚನೆಯಾಗಿ ಮಗ
ಅಳಲು ಪ್ರಾರಂಭಿಸುವುದು.

೬. ಪ್ರತಿಯೊಂದು ಮಗುವಿಗೂ ಒಂದೊಂದು ನಿಯಮಿತ
ಹಸಿವಿನ ಸ್ಥಿತಿಯುಂಟು. ಇದು ಕಾಲ ಕಾಲಕ್ಕೆ ಬದಲಾಗುವುದು
ಚಳಿಗಾಲದಲ್ಲಿ ಹೆಚ್ಚಾದ ಹಸಿವು, ಬೇಸಿಗೆಯಲ್ಲಿ ಕಡಿಮೆಯಾಗ
ವುದು, ಈ ಸಂದರ್ಭಗಳಲ್ಲಿ ತಾಯಂದಿರು ಮಗುವಿನ ಬೆ
ವಣಿಗೆಗೆ ಇಷ್ಟೇ ಹೊತ್ತು, ಇಷ್ಟೇ ಹಾಲು ಅನ್ನ ಕೊಡಬೇಕೆಂಬ

ಕಟ್ಟುನಿಟ್ಟನ್ನು ಪಾಲಿಸಬಾರದು. ಆಗಲೂ "ಬೇಕು, ಬೇಡ" ಎಂಬುದನ್ನು ತಿಳಿಸಲು ಮಗುವು ಅಳುವುದು.

೭. ಎದೆತೊಟ್ಟು ಚಿಕ್ಕದಾಗಿದ್ದರೆ ಅಥವಾ ಹಿಂದಕ್ಕೆ ಎಳೆದು ಕೊಂಡಿದ್ದರೆ ಮಗು ಎದೆ ಕಚ್ಚಿ ಹಾಲು ಕುಡಿಯಲು ಸಾಧ್ಯ ವಾಗುವುದಿಲ್ಲ. ಅಲ್ಲದೆ ಹಾಲು ಉತ್ಪತ್ತಿ ಹೆಚ್ಚಾಗಿದ್ದು ಎದೆ ಗಳು ತುಂಬಿ ಅತಿ ದೊಡ್ಡದಾಗುವುವು. ಆಗ ಚಿಕ್ಕದಾದ ಮಗುವಿನ ಬಾಯಿ ಸಮರ್ಪಕವಾಗಿ ಎದೆಯನ್ನು ಕಚ್ಚಿ ಹಾಲು ಕುಡಿಯಲು ಸಾಧ್ಯವಾಗುವುದಿಲ್ಲ. ಆಗಲೂ ಮಗು ಅತೃಪ್ತಿ ಮತ್ತು ಅಸಮಾಧಾನದಿಂದ ಅಳುವುದು.

೮. ಮಗುವಿಗೆ ಬಾಟಲು ಹಾಲು ಕುಡಿಸುವ ಪದ್ಧತಿ ಒಳ್ಳೆಯದಲ್ಲ. ಆದರೂ ಕೆಲವು ತಾಯಂದಿರು ತಮ್ಮ ದೇಹದ ಸೌಂದರ್ಯ ಹಾಗೂ ಆಕಾರ ಕೆಡುವುದೆಂಬ ಭಾವನೆಯಿಂದ ಬಾಟಲು ಹಾಲನ್ನೇ ಆಶ್ರಯಿಸುತ್ತಾರೆ. ಇದರಿಂದ ಮಗುವಿನ ಆರೋಗ್ಯ ಕೆಡಲು ಸೋಂಕಿನ ಮೂಲ ಬಾಟಲು ಆಗುವುದು. ಸೋಂಕನ್ನು ಸೂಚಿಸಲು ಮಗು ಅಳುವುದು.

೯. ಹಾಲು ನೀಡುವ ಬಾಟಲಿನ ರಬ್ಬರ್ ನಿಪ್ಪಲ್ ಗಟ್ಟಿ ಮತ್ತು ಒರಟಾಗಿದ್ದರೆ, ನಿಪ್ಪಲಿನ ರಂಧ್ರ ಅತಿ ಚಿಕ್ಕದು ಅಥವಾ ದೊಡ್ಡದಾಗಿದ್ದರೆ ಮಗು ಸುಲಭವಾಗಿ ಹಾಲು ಕುಡಿಯಲು ತೊಂದರೆ ಆಗುವುದು. ಅಂದರೆ ರಂಧ್ರ ಚಿಕ್ಕದಾಗಿದ್ದರೆ ಹಾಲು ಸರಿಯಾಗಿ ಸೋರದೆ ಇರಬಹುದು. ರಂಧ್ರ ದೊಡ್ಡ ದಾಗಿದ್ದರೆ ಹಾಲು ಬಿರುಸಾಗಿ, ಅಧಿಕವಾಗಿ ಬಾಯಿಗೆ ಬರುವುದ ರಿಂದ ಮಗು ಬಂದ ಹಾಲನ್ನು ನುಂಗಲು ಅಡಚಣೆ ಆಗುವುದು. ಆಗ ಮಗು ತನ್ನ ತೊಂದರೆಯನ್ನು ಹೇಳಲಾರದೆ ಅಳುವುದು.

೧೦. ತಾಯಿ ಎದೆ ಹಾಲು ಕುಡಿಸುವಾಗ ಸೂಕ್ತವಾದ ಭಂ ಯಲ್ಲಿ ಕುಳಿತು, ಹರ್ಷಚಿತ್ತಳಾಗಿರಬೇಕು. ಇಲ್ಲವಾದರೆ ಹಾಲಿ ಉತ್ಪತ್ತಿ ಕಡಿಮೆಯಾಗುವುದು. ಅಲ್ಲದೆ ಖಾಲಿ ಇರುವ ಎ ಯನ್ನು ಚೀಪುವಾಗ ಅನಾವಶ್ಯಕವಾಗಿ ಬಾಯಿನ ಮೂಲೆಗಳಿಂ ಮಗು ಗಾಳಿ ನುಂಗುವುದು. ಉದರ ಬೇನೆಯಿಂದ ಅಳು ಮಗು ಅಲ್ಪ ಸ್ವಲ್ಪ ಕುಡಿದಿದ್ದ ಹಾಲನ್ನು ಹಿಂದೆಸೆಯುವುದ (Regurgitation).

೧೧. ಮಗು ತನಗೆ ಹಿತವಲ್ಲದ ವಾಸನೆ ಅಥವಾ ರು ಸೂಚಿಸಲು ಅಳುವುದು. ಆಗ ವಾಂತಿಯೂ ಆಗಬಹುದು.

೧೨. ಮಗು ಕೊಠಡಿಯಲ್ಲಿ ಒಂಟಿಯಾಗಿದ್ದಾಗ ನನಗೆ ಭಯ ವಾಗಿದೆ, ರಕ್ಷಣೆಬೇಕು ಎಂದು ತಾಯಂದಿರ ಗಮನ ಸೆಳೆಯಲ ಅಳುವು ಪ್ರಾರಂಭವಾಗುವುದು.

೧೩. ಮಗು ಮಲಗಿದ್ದಾಗ ಕಾರಣಾಂತರದಿಂದ ಸ್ಥಳ/ಜಾ ಅಥವಾ ಭಂಗಿಯ ಬದಲಾವಣೆ ಆದರೂ ಮಗುವು ಅಸಮಾಧಾ ತೋರಿಸಲು ಅಳುವುದು.

೧೪. ಮೊದಲ ಬಾರಿ ಮಗುವಿಗೆ ಸ್ನಾನ ಮಾಡಿಸಲು ಬಟ್ ತೆಗೆದಾಗ, ಬಿಸಿ ಅಥವಾ ತಣ್ಣನೆ ನೀರನ್ನು ಮೈಮೇಲೆ ಹಾ ದಾಗ ಅಭ್ಯಾಸವಿಲ್ಲದ ಪ್ರಯುಕ್ತ ಮಗು ಅಳುವುದು. ಮುಂ ಅಭ್ಯಾಸವಾದಂತೆ ಅಳುವ ಬದಲು ತಾಯೊಂದಿಗೆ ಹೊಂದಿಕೊಂಡ ನಗುತ್ತಾ ಆಟವಾಡುವುದು.

೧೫. ಮಗು ಹುಟ್ಟಿದ ೩–೪ನೇ ತಿಂಗಳಲ್ಲಿ "ಸಾಯಂಕಾಲ ಅಳುವೆಂದೇ'' ಪ್ರಸಿದ್ಧವಾಗಿ ಪ್ರತಿನಿತ್ಯ ಅಳುವುದು. ಇದಕ್ ಕಾರಣ ಹಾಲಿಗೆ ಬದಲಾಗಿ ತಿನ್ನಿಸುವ ಆಹಾರ ಅನ್ನದ ಪ್ರಭಾ ಆಗಬಹುದು ಮತ್ತು ಹೊಸ ಆಹಾರಕ್ಕೆ ಹೊಂದಿಕೊಂಡ ಮೇ

ಮಗು ಅಳುವುದಿಲ್ಲ. ಸಾಮಾನ್ಯವಾಗಿ ಸಾಯಂಕಾಲ ೬ ರಿಂದ ೧೦ ಘಂಟೆ ಸಮಯದಲ್ಲಿ ಮಗು ಅಳುವುದಲ್ಲದೆ ಅತ್ತು ಅತ್ತು ಸಾಕಾಗಿ, ನಿಶ್ಯಕ್ತಿಯಿಂದ ನಿದ್ರೆ ಮಾಡುವುದು.

೧೬. ಮಗುವಿನ ಅಳುವಿಗೆ ಕಾರಣ ತಿಳಿಯದ ಅಜ್ಜಿ, ಅತ್ತೆಯರು ಕಾಯಿಲೆ ಎಂಬ ಕಲ್ಪನೆಯಿಂದ, ದೃಷ್ಟಿ ತಾಗಿದೆ, ಬಾಲಗ್ರಹ ಆಗಿದೆ ಎಂದು ತಮಗೆ ತಿಳಿದಂತೆ ಉಪಚಾರ ಮಾಡುವರು. ಜೊತೆಗೆ "ಬಾಣಂತಿ ಬಾಯಿ ಕಟ್ಟಿಲ್ಲ. ಸಿಕ್ಕಿದ್ದನ್ನೇ ತಿನ್ನುವಳೆಂದು ಕಾರಣ ಸೃಷ್ಟಿಸಿ ಬೈಯುವುದುಂಟು.

೧೭. ಮಕ್ಕಳು ಮಲ-ಮೂತ್ರ ಮಾಡುವಾಗ ಅಳುವುವು. ಇದಕ್ಕೆ ಕಾರಣಗಳು :

(ಅ) ಮೂತ್ರನಾಳದ ಸೋಂಕಾಗಿರಬಹುದು (U.T.I.)

(ಆ) ಗುದದ್ವಾರದಲ್ಲಿ ಚರ್ಮ ಸೀಳು ಬಿಟ್ಟಿರಬಹುದು (Fissur in ano)

(ಇ) ಗುದದ್ವಾರದಲ್ಲಿ ಚರ್ಮ ಕಿತ್ತಿರಬಹುದು (Excoriation of Skin)

(ಈ) ಮಲವು ತುಂಬಾ ಗಟ್ಟಿಯಾಗಿ (Constipated) ಹೊರಬರಲು ಕಷ್ಟಪಡುತ್ತಿರಬಹುದು.

ಮೂತ್ರನಾಳದ ಸೋಂಕಿನಿಂದ ಉರಿಮೂತ್ರದ (Dysuria) ತೊಂದರೆಯು ಸಾಮಾನ್ಯವಾಗಿ ಹೆಣ್ಣು ಮಕ್ಕಳಲ್ಲಿ ಹೆಚ್ಚು. ಪ್ರಾರಂಭದಲ್ಲೇ ಮೂತ್ರ ಪರೀಕ್ಷೆ ಮಾಡಿಸಬೇಕು. ಆಗ ಮೂತ್ರನಾಳದ ಸೋಂಕಿನ ಸುಳಿವನ್ನು ತಿಳಿದು ತಜ್ಞ ವೈದ್ಯರ ಸಲಹೆ ಮತ್ತು ಚಿಕಿತ್ಸೆ ಪಡೆಯುವುದು ಒಳ್ಳೆಯದು.

೧೮. ಕೆಲವು ಮಕ್ಕಳು ನಿದ್ರೆ ಬಂದಾಗ "ನನ್ನನ್ನು ಜೋಗುಳ ಆಡಿ ಮಲಗಿಸಿ" ಎಂದು ಸೂಚಿಸಲು ಅಳುವುದುಂಟು.

೧೯. ತಾಯಿ ಪ್ರತಿ ತಿಂಗಳು "ಮುಟ್ಟಾದಾಗ ಎದೆ ಹಾಲ ಕುಡಿಯುವ ಮಕ್ಕಳು ಹಾಲಿನ ರುಚಿ ಗ್ರಂಥಿ ರಸದೂತಗಳ ಉತ್ಪತ್ತಿಯಿಂದ ಬದಲಾಗುವುದು. ಈ ಸಂದರ್ಭದಲ್ಲಿ ಬೇಸ ವನ್ನು ಸೂಚಿಸಲು ಮಗು ಅಳುವುದು.

೨೦. ಮಗು ಹೊಸಬರ ಮುಖ ನೋಡಿದಾಗ ಮತ್ತು ಹೊಸ ಜಾಗದಲ್ಲಿ ಮಲಗಿಸಿದಾಗ "ಭಯ-ಭೀತಿ"ಯಿಂದ ಅಳುವುದು.

೨೧. ಎಂಟು ತಿಂಗಳ ಮಗುವಿಗೆ ತನ್ನವರು ಬೇರೆಯವರು ಎಂದು ಗುರುತಿಸುವ ತಿಳುವಳಿಕೆ ಬರುವುದು ಆಗ ತಾಯಂದಿರು ಏನಾದರೂ ಬೇರೆ ಮಗುವನ್ನು ಪ್ರೀತಿಯಿಂದ ಎತ್ತಿಕೊಂಡರೆ ಕೂಡಲೇ ಮಗುವು "ದ್ವೇಷ-ಅಸೂಯೆ" ತೋರಿಸಲು ಅಳುವುದು.

೨೨. ೬-೭ನೇ ತಿಂಗಳಲ್ಲಿ ಮಗುವಿಗೆ "ಹಾಲು ಹಲ್ಲು" (Milk Teeth) ಹುಟ್ಟುವಾಗ ನೋವು ಜ್ವರದಿಂದ ಅಳುವುದು ಅಲ್ಲದೆ ನೀರಿನಂತೆ ಭೇದಿಯೂ ಆಗುವುದು. ಮಗುವಿನ ವಸಡನ್ನು ಪರೀಕ್ಷಿಸಿದರೆ ಕೆಂಪಾದ ವಸಡಿನಲ್ಲಿ ಬಿರಕುಬಿಟ್ಟು ಹಲ್ಲುಹುಟ್ಟುತ್ತಿರುವ ಬಿಳಿ ಚಿಹ್ನೆ ಎದ್ದು ಕಾಣುವುದು!

೨೩. ತಾಯಿ ತಂದೆಯರು ತಮ್ಮ ಕರ್ತವ್ಯಗಳಲ್ಲಿ ನಿರತರಾಗಿ ದ್ದರೆ ಅಂದರೆ ತಾಯಿ ಒಂದು ಕ್ಲಬ್ಬಿನ ಅಧ್ಯಕ್ಷೆಯೋ ಕಾರ್ಯ ದರ್ಶಿಯೋ ಆಗಿ ಮನೆಯಲ್ಲಿ ಇರಲು ಬಿಡುವಿಲ್ಲವಿರುವುದು ಮತ್ತು ತಂದೆ ವ್ಯವಹಾರದಲ್ಲಿ ತೊಡಗಿ ಸಭೆ-ಸಮಾರಂಭ ಗಳಲ್ಲೇ ಕಾಲ ಕಳೆವ ಪರಿಸ್ಥಿತಿ ಇದ್ದರೆ ಮಕ್ಕಳು ತಾಯಿ ತಂದೆಯರೊಡನೆ ಕೂಡಿ ಆಡಿ ತಿಂಡಿ ತಿನ್ನಲು ಊಟ ಮಾಡಲು ಅವಕಾಶವಿರುವುದಿಲ್ಲ. ಆಗ ಮಕ್ಕಳು ತಾಯಿ ತಂದೆಯರ

"ಪ್ರೀತಿ", "ವಾತ್ಸಲ್ಯ" ಮತ್ತು "ಆರೈಕೆ"ಗಳಿಂದ ವಂಚಿತರಾಗುವರು. ಇದನ್ನು ತೋರ್ಪಡಿಸಲು ಮತ್ತು ಪೋಷಕರ ಗಮನವನ್ನು ತಮ್ಮ ಕಡೆ ಸೆಳೆಯಲು ಮಗು ಅಳುವುದುಂಟು.

೨೪. ಅಳುವ ಮಗುವನ್ನು ಮನೆಯಲ್ಲಿ ಯಾರಾದರೂ ಎತ್ತಿಕೊಂಡರೆ ಸಾಮಾನ್ಯವಾಗಿ ಸಮಾಧಾನ ಆಗುವುದು. ಇದಕ್ಕೆ ಬದಲಾಗಿ ಮಗುವು ಕಿರಿಕಿರಿ ಮಾಡಿ ಅಳುವುದು ಹೆಚ್ಚಾದರೆ ಆಗ ಮಗುವಿನ "ಅಸ್ವಸ್ಥಿಯು" ಸ್ಥಿತಿಗಳಾದ ಕಿವಿನೋವು, ತಲೆಭಾರ ಹೊಟ್ಟೆ ನೋವು, ಅತಿಯಾದ ಜ್ವರ ಅಥವಾ ಶ್ವಾಸಕೋಶಗಳ ಸೋಂಕು (ನಿಮೋನಿಯಾ) ಆಗಿರಬಹುದು. ವೈದ್ಯರ ಸಲಹೆ ಪಡೆಯುವುದು ಸೂಕ್ತ.

೨೫. ಮಗುವಿಗೆ ನೀಡುವ ಕೆಲವು ಆಹಾರ ಪದಾರ್ಥಗಳು ಒಗ್ಗದೆ (Allergy) ಮೈಮೇಲೆ ಕೆಂಪು ಗಂಧೆಯೋ ಮೈತ್ಯದಂತೆ ಕೆಂಪಾದ ಮಚ್ಚೆಗಳು ಕಾಣಿಸಿಕೊಳ್ಳುವುವು. ಈ ತೊಂದರೆಯನ್ನು ಗುರುತಿಸಲೆಂದು ಕೊಡುತ್ತಿರುವ ಒಗ್ಗದ ಆಹಾರವನ್ನು ನಿಲ್ಲಿಸಲೆಂದು ಮಗು ಅಳುವುದು ಅಲ್ಲದೆ ಮೈಯನ್ನು ತನ್ನ ಉಗುರುಗಳಿಂದ ಕೆರೆಯುವುದು. ಈ ಒಗ್ಗದ ಆಹಾರಗಳೆಂದರೆ ಹಸುವಿನ ಹಾಲು, ಹಣ್ಣಿನರಸ ಮೀನು ಮತ್ತು ಮೊಟ್ಟೆ ಅನುಮಾನ ಬಂದ ಆಹಾರಗಳನ್ನು ಕೂಡಲೇ ನಿಲ್ಲಿಸಬೇಕು.

೨೬. ಬೆಳೆದ ಮಕ್ಕಳು ಮನೆಯಲ್ಲಿ ಆಗಾಗ್ಗೆ ಅಳುವುದುಂಟು ಕಾರಣ

(ಅ) ಮಗುವಿನ ವ್ಯಕ್ತಿತ್ವದ ವೈಶಿಷ್ಟ
(ಆ) ಮನೆಯಲ್ಲಿ ಇತರ ಸದಸ್ಯರಿಂದ ಹಿಂಸೆ/ವರ್ತನೆ
(ಇ) ಶಾಲೆಯಲ್ಲಿ ಉಪಧ್ಯಾಯರಿಂದ ಶಿಸ್ತು, ಪಾಲನೆ ಶಿಕ್ಷೆ

(ಈ) ಸ್ನೇಹಿತರಿಂದ ಕಿರುಕುಳದ ತೊಂದರೆಗೊಳಗಾ ಬಹುದು. ಹಿನ್ನೆಲೆಯನ್ನು ಕಂಡುಹಿಡಿದು ಕೂಡ ಕೊರತೆಯನ್ನು ಸರಿಪಡಿಸಬೇಕು.

೨೭. ಬೇರೆ ಕೊಠಡಿಯಲ್ಲಿ ಮಲಗಿಸಿದ ಮಗು ರಾತ್ರಿಯ ಅಳುವುದು ಸಾಮಾನ್ಯ ಮತ್ತು ರೂಢಿಮಾಡಿಕೊಂಡ "ಅಭ್ಯಾ ಬಲವೇ" ಈ ರೀತಿ ಅಳುವುದರಿಂದ ಗಾಬರಿಯಾದ ತಾಯಿ–ತಂ ಯರು ಕೊಠಡಿಯೊಳಗೆ ಬಂದು ಪ್ರೀತಿ ತೋರಿ ಸಮಾಧಾ ಮಾಡಿ ತಿನ್ನಲು ಮತ್ತು ಕುಡಿಯಲು ಏನನ್ನಾದರೂ ಕೊಟ್ ಮಗು ಭೀತಿಗೊಂಡಿದೆ ಎಂಬ ಭಾವನೆಯಿಂದ ಮಗುವನ ತಮ್ಮ ಕೊಠಡಿಗೆ ಕರೆದುಕೊಂಡು ಹೋಗಿ "ಆಶ್ರಯ" ನೀಡುವರು. ಇದನ್ನೇ ಬಯಸಿದ ಮಗು ಸಮಾಧಾನವಾ ಅಳುವುದನ್ನು ನಿಲ್ಲಿಸುವುದು.

೨೮. ಬೆಳೆದ ಮಕ್ಕಳು ಗಂಟಲು ನೋವು, ಹೊಟ್ಟೆನೋವು ರಕ್ತಹೀನತೆಯ ನಿಶ್ಯಕ್ತಿಯಿಂದಲೂ ಅಳುವುವು. ಆಗ ತಾಯಿ ತಂದೆಯರು ಕಾರಣವೇನೆಂದು ಅರಿಯಲು ವೈದ್ಯರ ಸಲ ಮತ್ತು ಚಿಕಿತ್ಸೆಯನ್ನು ಪಡೆಯಬೇಕು.

೨೯. ಚೆನ್ನಾಗಿ ಬೆಳೆದ ಹುಡುಗಿಯರು ಇದ್ದಕ್ಕಿದ್ದಂತೆ ಅಳಲ ಪ್ರಾರಂಭಿಸುವರು. ಇದು "ರೋಮಾಟಿಕ್ ಕೋರಿಯಾ" ರೋಗದ ಪ್ರಥಮ ಲಕ್ಷಣ. ತಾಯಿ ತಂದೆಯರು ಚಿಂತೆಮಾಡ ಮನೋಭಾವ ವರ್ತನೆಯ ಈ "ಕೋರಿಯಾ ಕಾಯಿಲೆ" ತಜ್ಞ ವೈದ್ಯರ ಸಲಹೆ ಮತ್ತು ಚಿಕಿತ್ಸೆಕೊಡಿಸುವುದು ಉತ್ತಮ

೩೦. ಕೆಲವು ಮಕ್ಕಳು ಅತಿಯಾಗಿ ಅಳುವುದು ಮೂರ್ಛೆಯ (Epileptic Cry) ಮತ್ತು ಮೆದುಳಿನಗಡ್ಡೆಯ (Brai Tumour) ಭಾಗಶಃ ಲಕ್ಷಣಗಳಾಗಬಹುದು. ಅಲ್ಲ

ಅಳುವಿನ ಜೊತೆ ವಾಂತಿಯನ್ನೂ ಮಾಡಬಹುದು. ಇಂತಹ ಸಂದರ್ಭಗಳಲ್ಲಿ ಪೋಷಕರು ನರರೋಗ ತಜ್ಞ ವೈದ್ಯರಿಂದ ಸಲಹೆ ಪಡೆಯುವುದು ಒಳ್ಳೆಯದು.

೩೧. ಚಿಕ್ಕಮಕ್ಕಳು ಎಚ್ಚರವಾಗಿರುವ ಅವಕಾಶವನ್ನು ಉಪಯೋಗಿಸಿಕೊಂಡು ಕೈ ಕಾಲುಗಳನ್ನು ಆಡಿಸುತ್ತಾ, ಸಂತೋಷದಿಂದ ಆಟವಾಡುತ್ತವೆ. ಈ ರೀತಿಯ ಆಟವು ಮಗುವಿಗೆ ಒಂದು ರೀತಿಯ ವ್ಯಾಯಾಮವೂ ಹೌದು. ಆದರೆ ಕೆಲವು ತಾಯಂದಿರು ಮೂಢ ನಂಬಿಕೆಯಿಂದ ಮಗುವನ್ನು ಒಂದು ಬಟ್ಟೆಯಲ್ಲಿ ಸುತ್ತಿ ಮಲಗಿಸುವರು. ಆಗ ಮಗುವಿನ ಆಟಕ್ಕೆ ಅಡ್ಡಿಯಾಗುವುದು. ಇದನ್ನು ಪ್ರತಿಭಟಿಸಲು ಮತ್ತು ಆ ಅವಸ್ಥೆಯಿಂದ ಪಾರಾಗಲು ಮಕ್ಕಳು ಅಳುವುವು.

ಮಗುವಿನ ಅಳುವಿಗೆ (ಅ) ರೋಗರಹಿತ ಮತ್ತು (ಆ) ರೋಗಸಹಿತದ ಕಾರಣಗಳು.

## (ಅ) ಮಗು ಅಳಲು ರೋಗವಿಲ್ಲದ ಸಂದರ್ಭಗಳು ಎಂದರೆ

ಹಸಿವು, ಬಾಯಾರಿಕೆ, ಇರಿಸು ಮುರಿಸು ಮಾಡುವ ಗಾಳಿ, ಚಳಿ, ಶಾಖ, ನವೆ, ಸಾಯಂಕಾಲದ ನೋವು, ಒದ್ದೆ ಯಾದ ಕೂಸು ಚೌಕ, ಗದ್ದಲು, ಬೆಳಕು, ಕತ್ತಲು, ಕೀಟದ ಕಡಿತ, ಬಿಗಿಯಾಗಿರುವ ಉಡುಪು, ಹಲ್ಲು ಹುಟ್ಟುವಾಗ, ಎದೆ ಹಾಲು ಕುಡಿಯಲು ಅಡಚಣೆ, ಅಭ್ಯಾಸಬಲ, ಏಕಾಂತತೆ, ಸುತ್ತ ಮುತ್ತಲ ಪರಿಸ್ಥಿತಿ, ತಿಳಿಯಲು, ಆಯಾಸ, ಅಲ್ಲದೆ ಬಲವಂತ ವಾಗಿ ಹಾಲು ಕುಡಿಸುವಾಗ, ಮತ್ತು ಅನ್ನ ತಿನ್ನಿಸುವಾಗ, ಬೆರಳಿನ ಉಂಗುರ ಬಿಗಿಯಾದಾಗ ಸೊಂಟಕ್ಕೆ ಬಿಗಿಯಾದ

ಉಡಿದಾರ, ಕುತ್ತಿಗೆ, ಎದೆ ಮತ್ತು ಮೈಗೆ ತೈಲಗಳನ್ನು ಹಚ
ವುದರಿಂದ ಉಂಟಾದ ವಾಸನೆ. ಕಾಯಿಲೆಯ ಕಾರಣ ತಿಳಿಯ
ಕಾಯಿಸಿದ ಬಳೆಯಿಂದ ಬರೆ (ಚುಟಕಿ) ಹಾಕಿದಾಗ, ಖ
ಸುಣ್ಣಗಳನ್ನು ಮುಟ್ಟಿದ ಕೈಗಳಿಂದ ಅರಿಯದೆ ಕಣ್ಣು ಮು
ಕೊಂಡಾಗ, ಮಗು ಅಳುವುದು.

## (ಆ) ಮಗು ಅಳಲು ರೋಗ ಸಹಿತದ ಸಂದರ್ಭಗ ಎಂದರೆ

ಸೋಂಕು ರೋಗಗಳು ಸಾಮಾನ್ಯವಾಗಿ—

ಶ್ವಾಸಕೋಶಗಳ ತೊಂದರೆ, ಬಾಯಿಹುಣ್ಣು, ಪ್ರಾರಂಭ
ಪೋಲಿಯೋರೋಗ, ಕಿವಿನೋವು, ಮೂತ್ರನಾಳದ ಉ
(U.T.I) (Urinary Tract Infection)

ಕರುಳಿನ ತಡೆ (Intestinal obstruction)

ಡೊಕ್ಕರಿಸಿದ ಬಟ್ಟೆ (Strangulated Hernia)

ಒಗ್ಗದ ತಿಂಡಿ ಊಟಗಳು (Allergic Foods)

ಹೊಟ್ಟೆನೋವು (Abdominal Pain)

ಹೊಟ್ಟೆ ಉಬ್ಬರ (Abdominal Distension)

ತಲೆನೋವು (Head Ache), ಗಾಳಿತುಂಬಿದ ಎ
(Pnemo-Thorax)

ಉಳುಕು (Spiain) ಶ್ವಾಸನಾಳದಲ್ಲಿ ತಡೆ (Respirato
Obstruction)

ತಲೆಗೆ ಪೆಟ್ಟು (Head Injury)

ಹೆರಿಗೆ ಪೆಟ್ಟು (Birth Injury)

ಗುದದ್ವಾರದಲ್ಲಿ ಸೀಳು (Fissure in Ano) ಗುದದ್ವಾರದಲ್ಲಿ ಸುಲಿತಗೊಂಡ ಚರ್ಮ (Exeoriation of Analregion)

ಚರ್ಮ ತುರಿಕೆ (Itching Dermatitis)

ಕೂಸು ಚೌಕದ ಗಂದೆ (ಮಲ–ಮೂತ್ರಗಳ ಮಿಶ್ರಣದಿಂದ ಉಂಟಾದ ಅಮ್ಲದ ಪ್ರತಿಕ್ರಿಯೆ) (Napkin Dermatitis)

ಕಜ್ಜಿ (Scabies), ಬೆವರು ಸಲೆ (Priekly Heat)

ದಾರದಂತ ಹುಳುಗಳ ಕಾಟ (Thread Worms Infestation)

(ಇ) ಚಿಕಿತ್ಸೆಗಾಗಿ ನೀಡಿದ ಔಷಧಗಳ ಪ್ರತಿಕ್ರಿಯೆಯ ಅಳುವು

೧. ಎಫಿಡ್ರಿನ್ (Ephidrin)

೨. ಅಡ್ರಿನಲಿನ್ (Adrenaline)

೩. ಅಂಫಿಟಮಿನ್ (Amphetamine) ಮತ್ತು

೪. ಬಾರ್‌ಬಿಚುರೇಟ್ಸ್ (Barbiturates) ಮಾತ್ರೆಗಳನ್ನು ಚಿಕಿತ್ಸೆಗಾಗಿ ನೀಡಿದಾಗ ಮಕ್ಕಳ ವಯಸ್ಸು ಮತ್ತು ತೂಕಕ್ಕೆ "ಹೆಚ್ಚಾದ ಮದ್ದಿನ ಪ್ರಮಾಣ" ಆದಾಗಲೂ ಮತ್ತು ಕಾಯಿಲೆಗೆ ಕೊಡುತ್ತಿದ್ದ ಔಷಧವನ್ನು ತಕ್ಷಣ ನಿಲ್ಲಿಸುವುದರ ಪರಿಣಾಮದಿಂದ (Drug with drawal syndrome) ಮಕ್ಕಳಿಗೆ ಅನಾವಶ್ಯಕವಾಗಿ ಚುಚ್ಚುಮದ್ದು ನೀಡಿದಾಗ ನೋವು

(ಈ) ಅಪರೂಪದ ಕೆಲವು ಕಾಯಿಲೆಗಳಾದ

೧. ಕೆಂಚರೋಗ (Pink discase)

೨. ಫಿನೈಲ್‌ಕೀಟೋನ್ಯೂರಿಯಾ (Phenylketonuria)

೩. ಜಿಡ್ಡಿನ ಉಚ್ಚಾಟ (Coeliae disease)
೪. ಶಿಶುವಿನ ಕುತ್ತಿಗೆಯಲ್ಲಿನ ಗಂಟು (Sternomasto Tumar)

೫. ಅಳುವಿನ ತೀವ್ರತೆ ಮತ್ತು ಮುಂದುವರಿಕೆಯನ ಮಗುವಿನ ತಾಯಂದಿರು ಮಾತ್ರ ಅರ್ಥಮಾ ಕೊಳ್ಳಬಲ್ಲರು

೧. ಮಗುವಿಗೆ ಹೊಟ್ಟೆ ಹಸಿದಾಗ ಗಟ್ಟಿಯಾಗಿ ಮತ್ ಭಂಗಪಡಿಸಿದಂತೆ ಅಳುವುದು.
೨. ಅಸ್ವಸ್ಥತೆಯಾದ ಮಗುವಿನ ಅಳು ಒಂದೇರಾಗ ತಡ ಬಡಿಕೆಯ ಮತ್ತು ಬಿಟ್ಟು ಬಿಟ್ಟು ಇರುತ್ತ
೩. ಮಗುವಿನ ಕಾಚ ಒದ್ದೆಯಾದಾಗ (Weted napki ಬಿಸಿ ಅಥವಾ ಶೀತ ವಾತಾವರಣ ಉಂಟಾದಾ ಇರುವೆ ಚಿಟ್ಟೆ ಅಥವಾ ಹುಳು ಕಚ್ಚಿದಾಗ, ಮೂ ಕಟ್ಟಿಕೊಂಡು ಉಸಿರಾಡಲು ತೊಂದರೆಯಾದಾ ಕಿರಿ, ಕಿರಿ ಮಾಡಿ ಅಳುವುದು (Irritable cry)
೪. ಸೊಳ್ಳೆ ಕಚ್ಚಿದ್ದರೆ ದೇಹದ ಹೊರಭಾಗದ (Exposed parts) ಕೆಂಪು ಮಚ್ಚೆಯ ಗುರುತುಗ ಎದ್ದು ಕಾಣುವವು, ಮಗು ಅಳುವುದು.
೫. ಕಚ್ಚಿದ ಗುರುತುಗಳು ದೇಹದ ಒಳಭಾಗ (Covered parts) ಅಂದರೆ ಹೊಟ್ಟೆ, ಸೊಂಟ ಮೇಲಿದ್ದರೆ ಮಗುವಿನ ಹೊದ್ದಿಕೆ, ಚಾಪೆ, ಹಾ ಅಥವಾ ಮಂಚಗಳಲ್ಲಿ ಇರುವೆ, ತಿಗಣೆಗಳು ಇವೆಯೆ ಎಂದು ಹುಡುಕಬೇಕು. ಶುಭ್ರವಾದ ಬಿಳಿ ಬ

ಗಳನ್ನು ಮಕ್ಕಳಿಗೆ ಉಪಯೋಗಿಸಿದ್ದರೆ ಇರುವೆ ತಿಗಣೆಗಳನ್ನು ಸುಲಭವಾಗಿ, ಬೇಗ ಪತ್ತೆ ಮಾಡಬಹುದು, ರಕ್ತದ ಕಲೆಗಳನ್ನು ಹೊದ್ದಿಕೆ ಬಟ್ಟೆಯಲ್ಲಿ ಪೃಥಃಕರಿಸಲು ಸಹಾಯ ಆಗುವುದು.

(vi) ಮಗುವು ಅಳುವಾಗ ಸಂದರ್ಭಕ್ಕೆ ತಕ್ಕಂತೆ ಒರಳಾಡುವ ಒದೆಯುವ, ತಲೆಯನ್ನು ಅಕ್ಕ ಪಕ್ಕ ತಿರುಗಿಸುವ, ಕೈ-ಕಾಲುಗಳನ್ನು ಬೆರಳುಗಳನ್ನು ಮಡಿಸುವುದು ಮತ್ತು ನೀಡುವಂತೆ ಮಾಡುವುವು. ಅಲ್ಲದೆ ಕಿವಿ ನೋವು ಇದ್ದಾಗ ಕಿವಿಯನ್ನು ತಿಕ್ಕುವಂತಹ ಚಟುವಟಿಕೆಗಳನ್ನು ಕಾಣಬಹುದು.

## ೬. ಅಳುವ ಮಗುವನ್ನು ಸಮಾಧಾನ ಪಡಿಸಲು ಹಲವು ವಿಧಾನಗಳು

(ಅ) ಅಳುವ ಮಗುವನ್ನು ಎತ್ತಿಕೊಂಡು ಹೆಗಲ ಮೇಲೆ ಮಲಗಿಸಿ ಬೆನ್ನಿನ ಮೇಲೆ ತಟ್ಟುವ ವಿಧಾನ ಬಹಳ ಸರಳವಾದದ್ದು ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡಿ ತೂಗಬಹುದು. ಸ್ವಯಂ ಚಾಲನೆಯ ವಾಹನದಲ್ಲಿ ಕೂಡಿಸಿ ಆಡಿಸಬಹುದು.

(ಆ) ಶೀತ ವಾತಾವರಣ ಇದ್ದಾಗ ಮಗುವಿಗೆ ಬೆಚ್ಚನೆ ಬಟ್ಟೆ ತೊಡಿಸಬೇಕು.

(ಇ) ಬೇಸಿಗೆಯಲ್ಲಿ ತೆಳುವಾದ, ಸುಲಭವಾಗಿ ಬಿಚ್ಚುವಂಥಹ ಸಡಿಲವಾದ ಬಟ್ಟೆಗಳನ್ನು ಹಾಕಬೇಕು.

(ಈ) ಹಾಲು ಕುಡಿಯಲು ತಾಯಿ ಎದೆ ಕಚ್ಚಿಸಬೇಕು. ಅಥವಾ ಬಾಟಲು ಹಾಲು ಕುಡಿಯುವ ಅಭ್ಯಾಸವಿದ್ದರೆ ಬಾಟಲನ್ನು ಸರಿಯಾದ ರೀತಿಯಲ್ಲಿ ಹಿಡಿದುಕೊಳ್ಳಬೇಕು.

(ಉ) ಕೈ ಬೆರಳನ್ನು ಬಾಯಲ್ಲಿಟ್ಟಾಗ, ಚೀಪಲು ಪ್ರಾರಂಭ
ಅಳು ನಿಲ್ಲುವುದು) ಆದರೆ ಇದು ಸರಿಯಾದ ವಿಧಾನವಲ್ಲ.

(ಊ) ನಿರಂತರ ಅಳುವಿನಿಂದ ಉಸಿರು ಕಟ್ಟುವಿಕೆ (Brea
holding spell) ಮತ್ತು ಮೂರ್ಛೆ ಬರುವ ಸೂಚನೆ
ಅಳುವಿಗೆ (Epileptic cry Aura) ಮಕ್ಕಳನ್ನು ತ
ವೈದ್ಯರಿಗೆ ತೋರಿಸಿ, ಸೂಕ್ತ ಸಲಹೆ ಪಡೆಯಬೇಕು.

(ಋ) ರಾತ್ರಿ ಮಲಗುವಾಗ, ಮಗುವಿನ ಗುದದ್ವಾರ
ಎಣ್ಣೆ/ವ್ಯಾಸಲಿನ್ ಹಚ್ಚಿ ಮಲಗಿಸುವುದರಿಂದ ದಾರದ
ಹುಳುಗಳು (Thread worms) ಹೊರ ಬಂದು ಕಚ್ಚಿ ಮ
ಅಳುವುದನ್ನು ತಪ್ಪಿಸಬಹುದು, ನಂತರ ಹುಳುವಿನ ಔಷ
ಕೊಡುವುದು ಉತ್ತಮ, ಕಾಚ, ನಿಕ್ಕರುಗಳನ್ನು ಬಿಸಿನೀರಿನ
ಕುದಿಸಿ, ಇಸ್ತ್ರೀ ಮಾಡುವುದು ಒಳ್ಳೆಯದು.

(ೠ) "ಸೈಕ್ಲೋಫಾಂ" ದ್ರವ/ಹನಿಗಳನ್ನು ಕುಡಿಸಬಹು
ಆಗ ಹೊಟ್ಟೆನೋವು ಕಡಿಮೆ ಆಗುವುದು. "ಒಟೋಜಿಸಿಕ್
(Otegesic) ಹನಿಯನ್ನು ಕಿವಿಗೆ ಬಿಡುವುದರಿಂದ ಕಿವಿ ನೋ
ಕಡಿಮೆ ಆಗುವುದು ಮತ್ತು ಬಾಯಿ ಹುಣ್ಣಿಗೆ ೧% ಜಿ.
ಬಣ್ಣ ಹಚ್ಚುವುದು ಉತ್ತಮ.

## ೭. ರೋಗಕ್ಕೆ ತಕ್ಕಂತೆ ಮಗುವಿನ ಅಳುವ ಧ್ವನಿಯ ಬದಲಾಗುವ ಸಂದರ್ಭಗಳು

(೧) ತಿಂಗಳು ತುಂಬಿ ಹುಟ್ಟಿದ, ಆರೋಗ್ಯವಂ
ಹಸಿದಿರುವ, ಶಿಶುಕಾಚ ಅಥವಾ ಹಾಸಿಗೆ ಒದ್ದೆಯಾದಾ
ಮತ್ತು ಶಿಶುವಿಗೆ ನಿದ್ರೆಯು ಸೆಳೆತ ಬಂದಾಗ—ಮಗು
ಬಲವುಳ್ಳ, ಚಟುವಟಿಕೆಯಾಗಿ ಅಳುವುದು.

(೨) ಮೆದುಳ್ಪೊರೆಯುರಿತ (Meningitis) ಮೆದುಳುರಿತ (Eneephalitis) ಪಪ್ಪುಕಾವಮಾಲೆ (Kerancterus) ಮತ್ತು ನೀರ್ಧಲೆಯು (Hydrocephalus) ಇಳ್ಳ ಮಗುವಿನ ಅಳುವು ಉಚ್ಚಸ್ವರದ ಅಳುವಾಗಿರುವುದು (High pitched Cerebral Cry)

(೩) ಮುನಿಸಿನ ಮತ್ತು ಮನೋವರ್ತನೆಯ ಮಗು (Anger and Temper Tantrum) ಅಳುವಾಗ ಮಗುವಿನ ಅಳು ಎತ್ತರದ ಸ್ವರದಾಗಿರುವುದು.

(೪) ನ್ಯೂನ ಪೋಷಣೆಯು (Malnutration) ಶಿರ್ವಣತೆಯು ಕ್ವಾಷಿಯಾರ್ಕರ್ (Kwashiorkar)ನಲ್ಲಿ ಪಿಸುದನಿ ಅಥವಾ ಕಾತುರತೆಯ ಅಳು (Whispering. Whiming Cry) ಆಗಿರುವುದು.

(೫) ಪೆಡ್ಡಗುಜ್ಜ (Critinisum). ಧನಿನಾಳ ಉರಿತ (Laringitis) ಮತ್ತು ಗಂಟಲು ಬೇನೆ (Diphtheria.) ಗಳಲ್ಲಿ ಒರಟಾದ ಮತ್ತು ಗಂಟಲು ಕಟ್ಟಿದ ಧನಿಯಾಗಿರುವುದು (Gruff and hoarse Voice)

(೬) ಹುಟ್ಟುತ್ತಾ ಬಂದ ಧನಿನಾಳದ ಶಿಳ್ಳುಧನಿಯು (Congenital Laryngial stridor) ಸ್ವರ ಬಳ್ಳಿಯು ಲಕ್ವ (Vocal cord paralysis) ಧನಿನಾಳದ ಮೇಲ್ಪೊರೆ (Laryngeal Web of Papilloma) ಗಂಟಲು ಕಟ್ಟಿ, ಶಿಳ್ಳುಧನಿಯು ಅಳುವಾಗುವುದು

(೭) ಕ್ರೈಡು ಕ್ಯಾಟ್ ಸಿಂಡ್ರೋಮ್ (Cride-Cat Syudrome)ನಲ್ಲಿ ಮಗುವಿನ ಅಳು ಬೆಕ್ಕು ಅಳುವಧನಿ ಹೋಲುವುದು.

(೮) ತೀವ್ರ ಅಸ್ವಸ್ಥತೆ, (Acute Illness) ಸ್ನಾಯುು ಹೆದ್ದಣಿವು (Myasthenia Gravis) ಡೌನ್ ಸಿನ್‌ಡ್ರೋಂ (Down's Syndrome) ಬೇರಿಬೇರಿ (Beri Beri Dysphonia) ಸಂದ ಗಳಲ್ಲಿ ನಿಶ್ಶಾಣದ ಅಳು (Feeble Cry) ವಾಗಿ ವುದು.

(೯) ಬುದ್ಧಿಮಾಂದ್ಯತೆ ಮಕ್ಕಳಲ್ಲಿ (Mentally Retard Children) ಒಂದೇ ಸಮನಾದ ದನಿಯು ಅಳುವಾಗಿರುವುದು.

(೧೦) ಮೂರು ತಿಂಗಳ ಸಾಯಂಕಾಲದ ಅಳು (3 Months Evening Colic) ಕರುಳಿನ ಒಳಸ್ರಾ (Intssusceptions) ಯಲ್ಲಿ ಮಗು ಜೆನ್ನಾಗಿ ಆಡುತ್ತ ರಕ್ತ ಭೇದಿ ಆಗಿ, ಒಮ್ಮೆ ಅಳುವುದು ಮತ್ತೊಮ್ಮೆ ನಗುವ ಅಂದರೆ ಸ್ವಲ್ಪ ಸಮಯ ಬಿಟ್ಟು ಅಳುವುದು

(೧೧) ಶ್ವಾಸಕೋಶದ ಸೋಂಕು (Labar Pneumoni ಅಕ್ಯೂಟ್ ಬ್ರಾಂಕೈಟಿಸ್ (Acute Bronchitis) ಕೋಶದ ಕೀವು (Empyema) ಗಳಲ್ಲಿ ಘ್ರುಂಟಿಂಗ್ ಅಳು (Grunti Cry) ಆಗಿರುವುದು.

(೧೨) ಹುಡುಗಿಯರು ಬಹುಬೇಗ ಬೆಳೆದು ಮೈನೆರೆ (Precocious Puberty) ಅವರ ಧನಿಯು ಗಂಡಸಿನ ಗ ದ್ದಾಗಿರುವುದು (Masculine voice or cry)

(೧೩) ಅತಿ ಅಳುವು ಮೂರ್ಛೆರೋಗದ ಭಾಗಶಃ ಲಕ್ಷ (Epileptic cry-Aura) ಆಗಿರುವುದು.

## ೮. ಪೋಷಕರಿಗೆ ಅಳುವ ಮಗುವಿನ ರೋಗ ಸೂಚನೆಯ ಸುಳಿವುಗಳು

ಅಳುವ ಮಗುವಿನಲ್ಲಿ ಕಾಣುವ ರೋಗಗಳ ಲಕ್ಷಣಗಳು

(ಅ) ಜ್ವರವಿದ್ದರೆ—ಸೋಂಕಿನ ಲಕ್ಷಣವಾಗುವುದು.

(ಆ) ಉಸಿರಾಟದಲ್ಲಿ ತೊಡಕು ಇದ್ದರೆ

(i) ಶ್ವಾಸಕೋಶದ ಸೋಂಕು

(ii) ಎದೆ ನೋವು ಮತ್ತು

(iii) ಕಿವಿ ಮತ್ತು ಗಂಟಲು ನೋವುಗಳಿರಬಹುದು.

(ಇ) ತೀವ್ರ ಕಿವಿಯುರಿತವಿದ್ದರೆ—

(i) ಕಿವಿಯನ್ನು ಮುಟ್ಟಿದರೆ ಅಳುವುದು.

(ii) ಜೀನೆ ತಡೆಯಲಾರದೆ ಕಿವಿಯನ್ನು ಕೈಯಿಂದ ತಿಕ್ಕುವುದು.

(iii) ನೋವಿನಿಂದ ಮಲಗಲು ತೊಂದರೆಯಾಗುವುದು.

(ಈ) ಜ್ವರ ಹೆಚ್ಚಾಗಿದ್ದು ಮಗು ಕಿರಿ, ಕಿರಿ ಮಾಡುತ್ತಾ ತಲೆಯನ್ನು ಆಡಿಸುತ್ತಾ, ಅತಿಯಾಗಿ ಅಳುತ್ತಿದ್ದರೆ—

ಮೆದುಳಿನಲ್ಲಿ ಕೀವು ತುಂಬಿರುವ ರೋಗದ ಚಿಹ್ನೆ ಆಗಿರುವುದು.

(ಉ) ಮಲವಿಸರ್ಜನೆ ಮಾಡಿದಾಗ ಲೋಳೆಮಿಶ್ರಿತ ರಕ್ತ ಸ್ರಾವವಿದ್ದು, ಸುಳಿತ–ನೋವುಗಳಿಂದ ಅಳುತ್ತಿದ್ದ ಮಗುವು ಮಧ್ಯೆ ಮಧ್ಯೆ ಸಾಮಾನ್ಯ ಮಗುವಂತೆ, ನಗುತ್ತಾ ಸಂತೋಷ ದಿಂದ ಆಟ ಆಡುವ ಸ್ಥಿತಿಯು ಕರುಳು ಒತ್ತೂರಿಕೆಯು (Intussusception of Intestine) ಸೂಚನೆ ಆಗುವುದು.

(ಊ) ಮೂತ್ರ ವಿಸರ್ಜನೆ ಮಾಡುವಾಗ ಹುಡುಗರು ಲಿಂಗ ವನ್ನು ಕೈಯಲ್ಲಿ ಹಿಡಿದು, ಅಳುತ್ತಾ, ಹಿಂಡಿದರೆ ಆಗ ಮೂತ್ರ

ನಾಳದ ಸೋಂಕಿನಿಂದ ಸಣ್ಣ ಸಣ್ಣ ಕಲ್ಲುಗಳಿರಬಹುದು. ಹುಡ
ಯುರು ಮೂತ್ರನಾಳದ ಸೋಂಕು ಇರುವಾಗ ಕೆಳಹೊ
ನೋವು, ಮತ್ತು ಉರಿ ಮೂತ್ರ (Dysuria)ವೆಂದು ಅಳ
ದಾದರೆ ಸೋಂಕಿನ ಸುಳಿವು ಸಿಕ್ಕುವುದು.

(ಖು) ಹೊಟ್ಟೆಯಲ್ಲಿ ಗಾಳಿ ತುಂಬಿಕೊಂಡು ಹೊಟ್ಟೆ ಉಬ್
ಇದ್ದು ಪದೇಪದೇ ವಾಯು ಹೊರ ಬರುವುದು ಮತ್ತು ಕೆ
ವಾಸನೆ ಉಳ್ಳದ್ದಾಗಿರುವುದು. ಹಸ್ತವನ್ನು ಹೊಟ್ಟೆ
ಮೇಲಿಟ್ಟು ಪರೀಕ್ಷೆ ಮಾಡಿದರೆ ಮುದ್ದೆಯಂತ ಗಂಟುಗ
ಸಿಕ್ಕಬಹುದು (Intestinal Mass) ಅಲ್ಲದೆ ಗುಡುಗುಡುವೆ
ಕರುಳಿನ ನಾದವು ಪರೀಕ್ಷಕರ ಕಿವಿಗೆ ಕೇಳುವುದು.

(ಖೂ) ಬಟ್ಟೆ (Hernia) ಏನಾದರೂ ಇದ್ದಲ್ಲಿ ಮ
ಕೆಮ್ಮುವಾಗ/ಅಳುವಾಗ ಕರುಳಿನ ಸ್ವಲ್ಪಭಾಗ ರಂದ್ರದಿಂ
ಹೊರಬಂದು ಒತ್ತುಕಟ್ಟು (Strangulation) ಆಗಿರುವುದನ
ತೋರ್ಪಡಿಸುತ್ತದೆ.

(ಎ) ಮಗು ಬೆಳೆದಂತೆ ತನ್ನ ಅನ್ನಿಸಿಕೆ/ಅವಶ್ಯಕತೆಗಳನ
ಪಡೆಯಲು ಅಳುವುದು. ಆ ಅಳುವು ಗಟ್ಟಿಯಾಗಿ ಸ್ವಚ್ಛವಾ
ಇರುವುದು. ಅಲ್ಲದೆ ಅಳುವಾಗ ಕೈ-ಕಾಲುಗಳನ್ನು ಬಲವಾ
ಆಡಿಸುತ್ತಾ ಬಾಯಿ ಬಡಿಯುವುದು.

(ಏ) ಮಗು ಆಟವಾಡುವಾಗ ಏನಾದರೂ ಪೆಟ್ಟು ಬಿದ್ದಿತ್ತೆ
ಎಂದು ವಿಚಾರಿಸಬೇಕು, ಕೈ ಕಾಲು, ಮೈಯಿಯ ಚರ್ಮ
ದಲ್ಲಿ ಉಂಟಾಗಿರುವ ಬದಲಾವಣೆಗಳಾದ "ನೀಲಿಗಟ್ಟಿರುವ
ತರುಚಿರುವ, ಊತ ಬಂದು ನೆಂದುವಾದ ಕೀಲು ಬಾ
ಮೂಳೆ ಮುರಿತ ಅಥವಾ ಮೂಳೆ ಪಲ್ಲಟಗಳನ್ನು ಕಾ
ಬಹುದು. ಇವುಗಳ ನೋವಿನಿಂದ ಅಳುವುದು.

(ಎ) ಸಾಮಾನ್ಯವಾಗಿ ಮಕ್ಕಳಿಗೆ ೪-೫ ತಿಂಗಳ ವಯಸ್ಸಿನಲ್ಲಿ ಮೊದಲವಾದ ಆಹಾರ ತಿನ್ನಿಸುವುದು ಸೂಕ್ತ ಮತ್ತು ವಾಡಿಕೆ, ಆದರೆ ಕೆಲವು ತಾಯಂದಿರು ತಿಳಿಯದೆ ಮುಂಚಿತವಾಗಿ ಅಥವಾ ನಿಧಾನವಾಗಿ ಅನ್ನ ತಿನ್ನಿಸಲು ಪ್ರಾರಂಭಿಸುವರು. ಆಗ ಆಗಿಯುವಿಕೆಯು ಅಭ್ಯಾಸವಿಲ್ಲದೆ ಬೇಡವೆಂದು ಸೂಚಿಸುವ ವಿಧಾನವಾಗಿ ಮಗು ಅಳುವುದು. ಇಂತಹ ಮಕ್ಕಳಲ್ಲಿ ಬೆಳವಣಿಗೆಯು ಸಮರ್ಪಕವಾಗಿ ಇರುವುದಿಲ್ಲ.

(ಬ) ಮಗುವು ಅತಿಯಾಗಿ ಅಳುವುದರಿಂದ ಕಣ್ಣಿನ ರೆಪ್ಪೆಗಳು ಮತ್ತು ಮುಖ ಊದಿ ಕೊಳ್ಳುವುದು ಸಾಮಾನ್ಯ ಆದರೆ ಈ ಚಿಹ್ನೆಗಳು ಇತರ ರೋಗಗಳಲ್ಲೂ ಕಾಣಬಹುದು. ಅಂದರೆ

(i) ಕಣ್ಣುನೋವು (Conjectavitis)

(ii) ಮೂತ್ರಪಿಂಡಗಳ ಸೋಂಕು (Nephritis and Nephrosis)

(iii) ತಲೆಗೆ ಪೆಟ್ಟು (Head injury) ಆದಾಗಲೂ ಕಾಣುತ್ತವೆ.

(ಲ) ಒಂದು ವಿಧದ ಸಹಜಾತ ಹೃದಯರೋಗ (Congenital Cyanotic Heart-disease) ಲಕ್ಷಣವಾಗಿ ತುಟಿ ಮತ್ತು ಬೆರಳುಗಳು ನೀಲಿ ಬಣ್ಣವಾದಾಗ ಮಗುವು ಆಮ್ಲಜನಕದ ಕೊರತೆಯಿಂದ ಅಳುವುದು ಮತ್ತು ಏದುಸಿರು ಹಾಕಿ ಕೂಡು ವುದು. ಇದು "ಸೈನಾಟಿಕ್ ಸ್ಪೆಲ್ಸ" (Cynotic spell) ಸೂಚನೆಯೂ ಹೌದು.

(ಡಿ) ರಾತ್ರಿ ನೆಮ್ಮದಿಯಾಗಿ ಮಲಗಿದ್ದ ಮಗು ಇದ್ದಕ್ಕಿದ್ದಂತೆ ಅಳಲು ಪ್ರಾರಂಭಿಸುವುದು, ಆಗ ಇತರರೂ ಎಚ್ಚರವಾಗಿ ದೀಪ ಹಾಕಿ ನೋಡಿದಾಗ ಮಗು ತನ್ನ ಗುದದ್ವಾರವನ್ನು ಬೆರಳು

ಗಳಿಂದ ಕೆರೆಯುತ್ತಿರುವುದು. ಸ್ಥಳ ಪರೀಕ್ಷೆ ಮಾಡಿದಾಗ ದಾ
ದಂತೆ ಬಿಳಿಯ ಸಣ್ಣ ಸಣ್ಣ ಹುಳುಗಳು (Thread worm
ಕಾಣುವುದು. ಇದು ದಾರದುಳುಗಳ ಕಾಟವನ್ನು ಸೂಚಿ
ತ್ತದೆ, "ಅಳುವಮಗು" ಬಗ್ಗೆ ಸಂಕ್ಷಿಪ್ತವಾಗಿ ಹೇಳುವುದಾದ

"ಮಗುವಿನ ಅಳು ಜನನದಿಂದ ಆರಂಭವಾಗಿ, ಬೆಳೆದಂ
ಬಾಳಲು ಬೇಕಾದ ಅವಶ್ಯಕತೆಗಳಿಗೂ ಬೇಡಿಕೆಯು ಅಳುವಿನಲ್ಲಿ
ಕಳೆದು, ಬದುಕಿನಲ್ಲಿ ಸಮರ್ಪಕವಾದ ಸೌಲಭ್ಯಗಳು ದೊರೆಯ
ಅಳುವಿನಲ್ಲೇ ಮುಂದುವರೆದ ಮಾನವನ ಜೀವನ ಅಳುವಿನಲ್ಲೇ
ಅಂತ್ಯಗೊಳುವುದು."

## ೨. ಮಗುವಿನ ಬೆಳವಣಿಗೆಯಲ್ಲಿ ಕುಟುಂಬದ ಪಾತ್ರ

ಕುಟುಂಬ ಒಂದು ಸಾರ್ವತ್ರಿಕವಾದ ಪ್ರಾಥಮಿಕ ಹಾಗೂ ಸಾಮಾಜಿಕ ಘಟಕ. ಇದು ಸಾಂಸ್ಕೃತಿಕ ಸಂಸ್ಥೆಯೂ ಹೌದು. ಆದ್ದರಿಂದ ಹಲವು ಆದರ್ಶ ಕುಟುಂಬಗಳು ಒಂದುಗೂಡಿ ಒಂದು ಆದರ್ಶ ಸಮಾಜವನ್ನು ನಿರ್ಮಿಸುತ್ತವೆ.

ಒಂದು ಆದರ್ಶ ಕುಟುಂಬದಲ್ಲಿ ಪ್ರತಿ ಸದಸ್ಯನೂ ಸಮನಾದ ಸಾಕಷ್ಟು ಸೌಲಭ್ಯ ಮತ್ತು ಅವಕಾಶವನ್ನು ಪಡೆಯುತ್ತಾನೆ. ಇದರಿಂದಲೇ ಕುಟುಂಬದ ಹಾಗೂ ಸಮಾಜದ ಕ್ಷೇಮಾಭ್ಯುದಯಕ್ಕಾಗಿ ಪ್ರತಿ ಸದಸ್ಯನಲ್ಲಿ ಹುದುಗಿರುವ ಸ್ವಾಭಾವಿಕ ಸಾಮರ್ಥ್ಯಗಳು ಎದ್ದು ಕಾಣುತ್ತವೆ. ಕುಟುಂಬದ ಪ್ರತಿ ಸದಸ್ಯನೂ ಪರಸ್ಪರ ಅಭ್ಯುದಯ ಮತ್ತು ಸಾಧನೆಯಲ್ಲಿ ಮೆಚ್ಚುಗೆ ಸೂಚಿಸಿ ಆನಂದ ಅನುಭವಿಸಲು ಪ್ರಯತ್ನಿಸಬೇಕು.

ದೇಹವು ಹೇಗೆ ಆಹಾರದಿಂದ ವೃದ್ಧಿಹೊಂದುವುದೋ ಹಾಗೆ ಮನಸ್ಸು ಪ್ರೀತಿಯಿಂದ ವೃದ್ಧಿಯಾಗುವುದು. ನಾವು ಮನಸ್ಸು ಮಾಡಿದರೆ ಏನನ್ನು ಬೇಕಾದರೂ ಹಣಕೊಟ್ಟು ಅಂಗಡಿಯಲ್ಲಿ ಕೊಳ್ಳಬಹುದು ಆದರೆ ಪ್ರೀತಿಯನ್ನು ಕೊಳ್ಳಲು ಸಾಧ್ಯವಿಲ್ಲ. ಬಡ ಮಕ್ಕಳು ಸಂತೋಷವಾಗಿ ಬೆಳೆದು, ವೃದ್ಧಿಯಾಗಿ ಬಾಳುತ್ತಾರೆ. ಅದಕ್ಕೆ ಕಾರಣ ತಂದೆ ತಾಯಂದಿರು ತೋರುವ ಹೆಚ್ಚಿನ ಪ್ರೀತಿ. ಅದೇ ಶ್ರೀಮಂತರ ಅಥವಾ ವಿವಾಹ ವಿಚ್ಛೇದನ ಪಡೆದವರ ಮಕ್ಕಳು ಪ್ರೀತಿ ವಾತ್ಸಲ್ಯಕ್ಕಾಗಿ ಪ್ರಯಾಸ ಪಡಬೇಕು.

ಪ್ರಾರಂಭದಲ್ಲಿ ಮಗು ತಾಯಿ ತಂದೆಯರ ಪ್ರೀತಿಯಿಂದ

ಬೆಳೆದರೂ ಅನಂತರ ಅದೇ ಪ್ರೀತಿಯನ್ನು ಸಹೋದ
ಸಹೋದರ, ಸಂಬಂಧಿಗಳು, ಸ್ನೇಹಿತರು, ಗುರುಗಳ
ಸಹೋದ್ಯೋಗಿಗಳು ಮತ್ತು ಸಮಾಜದಿಂದ ಪಡೆಯುವು
ಅಭಿವೃದ್ಧಿಗೆ ಅವಶ್ಯಕವಾಗಿದೆ.

ಅವಿಭಕ್ತ ಕುಟುಂಬದಲ್ಲಿ ಸದಸ್ಯರುಗಳ ಸಂ
ಹೆಚ್ಚಾಗಿದ್ದು ಅವರ 'ಸಹಬಾಳ್ವೆ' ಮಗುವಿನ ಅಭಿವೃದ್ಧಿಯ
ಮಹತ್ವದ ಪಾತ್ರ ವಹಿಸುವುದು.

(೧) ಎಲ್ಲರೂ ಒಟ್ಟಿಗೆ ಒಂದೇ ಮನೆಯಲ್ಲಿದ್ದು ಪರಸ್ಪ
ಹೊಂದಿಕೊಂಡು ಬಾಳುವುದು ಅವರು ಒಬ್ಬರನ್ನೊಬ್ಬ
ಪ್ರೀತಿಸಿ, ಗೌರವಿಸುವುದರಿಂದ ಮಕ್ಕಳ ಮೇಲೆ ಪರಿಣಾಮಬೀ
ಮುಂದಿನ ಬಾಳಿಗೆ ಮಾರ್ಗದರ್ಶನ ನೀಡಿದಂತಾಗುವುದು.

(೨) ತಾಯಿ ತಂದೆಯರು ಕೆಲಸಕ್ಕೆ ಸೇರಿ ದುಡಿಯುತ್ತಿದ್ದ
ಅವರು ಕಚೇರಿಗಳಿಗೆ ಹೋದಾಗ ಮಗುವಿನ ಮೇಲ್ವಿಚಾರಣೆಯ
ಜವಾಬ್ದಾರಿಯ ಪ್ರಶ್ನೆ ಉದ್ಭವವಾಗುವುದು. ಅವಿಭಕ್ತ
ಕುಟುಂಬವಾದರೆ ಮನೆಯಲ್ಲಿರುವ ಅಜ್ಜಿ, ಅಜ್ಜ, ದೊಡ್ಡಪ್ಪ
ದೊಡ್ಡಮ್ಮ, ಚಿಕ್ಕಪ್ಪ, ಚಿಕ್ಕಮ್ಮ ಮತ್ತು ಅವರುಗಳ ಮಕ್ಕಳ
ಎಲ್ಲರೂ ಒಂದುಗೂಡಿ ಬಾಳಲು ಅನುಕೂಲವಾಗುವುದು.

ಅವಿಭಕ್ತ ಕುಟುಂಬದಲ್ಲಿ ಒಂದು ವೇಳೆ ತಾಯಿ-ತಂದೆಯರ
ಇತರ ಸದಸ್ಯರೊಡನೆ ವ್ಯವಹಾರದಲ್ಲಿ ಜಗಳವಾಡಿ ಕೋಪವಾ
ಕೊಂಡಿದ್ದರೂ ಅಜ್ಜಿ, ಅಜ್ಜರ ಪ್ರೀತಿ, ಸಹಕಾರ, ಆಶ್ರಯದಿಂ
ಮಕ್ಕಳು ಕಹಿ ವಾತಾವರಣ ಮರೆತು ಬೆಳೆಯಲು ಸ್ಫೂರ್ತಿ
ದೊರೆಯುವುದು.

(೩) ಅವಿಭಕ್ತ ಕುಟುಂಬದಲ್ಲಿ ಆಕಸ್ಮಿಕವಾಗಿ ತಾಯಿ ಅಥವಾ
ತಂದೆ ದೈವಾಧೀನವಾದರೆ ಮಗುವಿನೊಡನೆ ಕುಟುಂಬದ ಇತರ

ಸದಸ್ಯರು ಸುಲಭವಾಗಿ ಸಹಕರಿಸಿಕೊಂಡು ಹೋಗುವುದರಿಂದ ಆಗಬಹುದಾದ ಮಕ್ಕಳ ಮೇಲಿನ ಆಘಾತ ಪರಿಣಾಮಗಳು ತಪ್ಪುವುವು

(೫) ಅವಿಭಕ್ತ ಕುಟುಂಬದಲ್ಲಿ ಹೇಗೆ ಎಲ್ಲರೂ ಒಬ್ಬರನ್ನೊಬ್ಬರು ಪ್ರೀತಿಸಿ, ಒಂದುಗೂಡಿ ಬಾಳುವರೆಂಬುದನ್ನು ಮಗು ನೋಡಿ, ಕಲಿತು ತಾನೂ ಇತರರೊಡನೆ ಸಹಬಾಳ್ವೆ ನಡೆಸಲು ಪ್ರಯತ್ನಿಸುವುದು.

(೬) ಅವಿಭಕ್ತ ಕುಟುಂಬದಲ್ಲಿ ಮಗುವಿನ ತಾತ ಉಪಾಧ್ಯಾಯ ಚಿಕ್ಕಪ್ಪ ಚಿತ್ರಗಾರ, ದೊಡ್ಡಪ್ಪ ವೈದ್ಯ ಅಥವಾ ಇಂಜಿನಿಯರ್, ದೊಡ್ಡಮ್ಮ ವಿಖ್ಯಾತ ವಿಜ್ಞಾನಿ, ಒಬ್ಬ ಅಕ್ಕ ಸಂಗೀತ ಗಾಯಕಿ ಮತ್ತೊಬ್ಬ ಅಣ್ಣ ಕ್ರೀಡಾಪಟುವಾಗಿದ್ದರೆ ಪ್ರತಿಯೊಬ್ಬರ ಸ್ಥಾನಗಳು ಮಗುವಿನ ಬಾಳಿನ ಮೇಲೆ ಹಲವಾರು ಉತ್ತಮ ವಾತಾವರಣಗಳ ಪ್ರತಿಭೆಯ ಪ್ರದರ್ಶನವಾಗಿ ಅವರೊಂದಿಗೆ ಹೊಂದಿಕೊಂಡು ಬೆಳೆದ ಮಗು ಮುಂದೆ ಪ್ರತಿಭಾವಂತನಾಗಲು ಸಹಕಾರಿಯಾಗುವುದು.

(೭) ಅವಿಭಕ್ತ ಕುಟುಂಬದ ಕಿರಿಯ ಸದಸ್ಯರಲ್ಲಿ ಏನೇ ಭಿನ್ನಾಭಿಪ್ರಾಯಗಳಿದ್ದರೂ ಹಿರಿಯ ಸದಸ್ಯರಿಗೆ ಹೆದರಿ ಎಲ್ಲವನ್ನೂ ಮರೆತು ಪ್ರತಿಯೊಬ್ಬರೂ ಸಂತೋಷದಿಂದ ಬಾಳನ್ನು ಸಾಗಿಸುವುದರಿಂದ ಮಕ್ಕಳ ಮೇಲೆ ಪ್ರಭಾವ ಉಂಟಾಗಿ ಸಮಾಜದಲ್ಲಿ ಸ್ನೇಹಿತರು ಮತ್ತು ಸಹೋದ್ಯೋಗಿಗಳೊಡನೆ ಮುಂದೆಯೂ ಬಾಳಲು ಬುನಾದಿಯಾಗುವುದು.

(೮) ಅವಿಭಕ್ತ ಕುಟುಂಬದಲ್ಲಿ ಎಳೆವಯಸ್ಸಿನಿಂದಲೂ ಬೆಳೆದ ಮಗು ದಾಯಾದಿಗಳೊಡನೆ ಆಟವಾಡುವ ಸಾಮಾನುಗಳನ್ನು ಪುಸ್ತಕಗಳನ್ನು, ಬಟ್ಟೆಗಳನ್ನು ಆಗಾಗ್ಗೆ ಬದಲಾಯಿಸಿಕೊಳ್ಳುವ

ಮತ್ತು ತಿಂಡಿಗಳನ್ನು ಹಂಚಿಕೊಂಡು ತಿಂದು ಪ್ರೀತಿ–ವಾತ್ಸಲ್ಯ ಗಳಿಂದ ಬೆಳೆಯುವುದರಿಂದ ಮುಂದೆ 'ತನ್ನದು, ಬೇರೆಯವರದು' ಎಂಬ ಭೇದಭಾವವಿಲ್ಲದೆ ಸ್ನೇಹಿತರೊಡನೆಯೂ ಅದೇ ಪ್ರೀತಿ ವಾತ್ಸಲ್ಯಗಳನ್ನು ಬೆಳಸಿಕೊಂಡು ಬಾಳಲು ತರಬೇತಿ ಅವಕಾಶ ದೊರೆತಂತಾಗುವುದು.

(೯) ಅನೇಕವೇಳೆ ಬಿಡುವಿಲ್ಲದ ತಾಯಿ-ತಂದೆಯರಿಂದ ದೂ ವಾದ ಬಹುಮಕ್ಕಳು ಅವಿಭಕ್ತ ಕುಟುಂಬದ ಅಜ್ಜಿ–ಅಜ್ಜರೊತ ಬೆರೆತು ಬಾಳುವುದಕ್ಕೆ 'ರಕ್ಷಣೆ' ದೊರೆಯುವುದು ಒಂಟಿಯಾ ವ್ಯಕ್ತಿ ಕುಟುಂಬದಲ್ಲಿ ಈ ಸೌಲಭ್ಯ ದೊರೆಯದೆ ಮಗು ಚಿಂ ಪಡುವುದು.

(೧೦) ಅವಿಭಕ್ತ ಕುಟುಂಬದ ಸದಸ್ಯರುಗಳಲ್ಲಿ ಹೊಂದಾಣಿ ಇಲ್ಲದೆ ಸಣ್ಣಪುಟ್ಟ ಮಾತುಗಳಿಗೆಲ್ಲಾ ಜಗಳ ಮಾಡಿಕೊಂಡ ಕೋಪ, ಮುನಿಸುಗಳಿಂದ ಮಾತುಬಿಟ್ಟು ಮೌನವಾಗಿದ್ದರೆ ಆಗ ಮನೆಯಲ್ಲಿ ಅಶಾಂತಿ ಉಂಟಾಗಿ ವಿರಸ ಉಂಟಾಗುವುದು.

ಖಿನ್ನರಾದ ಗಂಡಸರು ಇದನ್ನು ಮರೆಯಲು ಧೂಮಪಾ ಮತ್ತು ಮದ್ಯಪಾನ ಮಾಡಲು ಪ್ರಾರಂಭಿಸಿ ಹೊತ್ತಿಲ್ಲದ ಹೊತ್ತಿ ನಲ್ಲಿ ಮನೆಗೆ ಬರುವುದರಿಂದ ಎಳೆಯರ ಮೇಲೂ ಈ ದುಷ್ಪ ಣಾಮಗಳುಂಟಾಗಿ ಕಪ್ಪು ಕಾಣದಂತೆ ಮಕ್ಕಳೂ ಈ ದುಶ ಚಟಗಳಿಗೆ ಬಲಿಯಾಗಿ ಸಮಾಜದಲ್ಲಿ ಕೆಟ್ಟ ಹೆಸರು ಪಡೆ ಬಹುದು. ಇದರಿಂದ ಮನೆತನದ ಗೌರವ ಕಡಿಮೆಯಾ ಮರ್ಯಾದೆ ಹಾಳಾಗುವುದು.

ಪ್ರತಿ ಮಗುವಿನ ಜೀವನದಲ್ಲಿ ತಾಯಿ–ತಂದೆಯರೆ ಪ್ರಥಮ ಮತ್ತು ಪ್ರಮುಖ ಗುರುಗಳು. ಮಗು ತಾಯಿ ತಂದೆಯರು ಮಾತನಾಡುವುದನ್ನು ಕೇಳಿ ಮಾತು ಕಲಿತುಕೊಳ

ವುದು. ಒಬ್ಬರನ್ನೊಬ್ಬರು ಹೇಗೆ ಪ್ರೀತಿಸಬೇಕು ಹೊಗಳಬೇಕು ಎನ್ನುವುದನ್ನು ಹೇಳಿಕೊಡುತ್ತಾರೆ. ತಿಂಡಿ ತಿನ್ನುವುದು ಹೇಗೆ ಎಂಬುದನ್ನು ಮೊದಲಿನಿಂದಲೂ ಹೇಳಿ ಕಲಿಸುವರು. ಶೌಚಾಲಯವನ್ನು ಉಪಯೋಗಿಸುವ ರೀತಿ ಸ್ನಾನ ಮತ್ತು ಮಾಡಬೇಕಾದ ಇತರ ಕೆಲಸಗಳನ್ನು ತಿಳಿಸುವರು. ವಿದ್ಯಾವಂತ ತಾಯಿ-ತಂದೆಯರು ಬಿಡುವಿದ್ದಾಗ ಕಥೆಪುಸ್ತಕಗಳನ್ನು ಓದಿ ಮಕ್ಕಳು ಓದಲು ಪರೋಕ್ಷವಾಗಿ ಪ್ರೇರೇಪಿಸುತ್ತಾರೆ. ಸಂದರ್ಭಕ್ಕೆ ತಕ್ಕಂತೆ ಎಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಮೊದಲಿನಿಂದಲೂ ಹೇಳಿಕೊಡುತ್ತಾರೆ. ದೇವರಲ್ಲಿ ಭಕ್ತಿ. ದೇವಸ್ಥಾನಗಳಿಗೆ ಹೋಗುವುದನ್ನು ಮತ್ತು ದೇವರಲ್ಲಿ ನಂಬಿಕೆ ಬರುವಂತೆ ದೇವರ ಮಹಿಮೆಗಳನ್ನು ತಿಳಿಸಿ ಮುಂದೆ ಮಕ್ಕಳೂ ಆಚರಿಸುವಂತೆ ಮಾಡಿ 'ದೈವ ಬಲವೇ ಬಲಂ ಬಲಂ' ಎಂಬುವುದನ್ನು ತೋರಿಸುವರು ರಾಷ್ಟ್ರದ. ಸ್ವಾತಂತ್ರ್ಯಕ್ಕಾಗಿ ಹೋರಾಡಿದವರ ಮತ್ತು ಅವರ ಅನುಯಾಯಿಗಳ ಹುಟ್ಟುಹಬ್ಬಗಳನ್ನು ಆಚರಿಸುವುದರಿಂದ ಮಕ್ಕಳ ಮನಸ್ಸಿನ ಮೇಲೆ ಮಹತ್ತರ ಪರಿಣಾಮ ಉಂಟಾಗಿ ಸ್ವಾತಂತ್ರ್ಯ ಯೋಧರ ಬಗ್ಗೆ ಗೌರವ, ರಾಷ್ಟ್ರಪ್ರೇಮಕ್ಕೆ ಪ್ರೇರೇಪಣೆ ನೀಡಿದಂತಾಗುವುದು. ಭಾರತದ ಸಂಪ್ರದಾಯದಲ್ಲಿ ಕಿರಿಯರು ಹಿರಿಯರಿಗೆ ತಲೆಬಾಗಿ ನಮಸ್ಕರಿಸುವುದು ಮೊದಲಿನಿಂದಲೂ ನಡೆದುಬಂದಿದೆ ಅಂತೆಯೇ ಕೊಡಗಿನ ಜನತೆ ಹಿರಿಯರನ್ನು ಕಂಡಾಗ ಬಾಗಿ ಪಾದ ಮುಟ್ಟಿ ನಮಸ್ಕರಿಸಿ ಗೌರವ ಸೂಚಿಸುವುದು ಆಶೀರ್ವಾದ ಪಡೆಯುವುದು ಇಂದಿಗೂ ವಾಡಿಕೆಯಲ್ಲಿದೆ

ತಾಯಿ ತನ್ನ ದಿನದ ಸಮಯವನ್ನು ಮಕ್ಕಳ ಅಭಿವೃದ್ಧಿಗಾಗಿ ಮೀಸಲಿಟ್ಟು ಅವರ ಬಟ್ಟೆ ಒಗೆಯುವುದು. ಸಮಯಕ್ಕೆ ಸರಿಯಾಗಿ ತಿಂಡಿ ಊಟಗಳನ್ನು ಮಕ್ಕಳ ಇಷ್ಟದಂತೆ ಶುಚಿ-ರುಚಿ

ಯಾದ ಅಡಿಗೆ ಮಾಡಿಕೊಡುವಳು. ತಂದೆ ಇಡೀ ದಿನ ದುಡಿದ ಮಕ್ಕಳಿಗಾಗಿ ಸಂಪಾದಿಸಿ ತಂದು ಖರ್ಚು ಮಾಡಿ ಮಕ್ಕಳನ ಸಂತೋಷದಲ್ಲಿ ಬೆಳೆಸುತ್ತಾರೆ. ಮಕ್ಕಳು ಸಂಪ್ರದಾಯದಂ ನಯ, ವಿನಯ ಕಲಿತು ಕೀರ್ತಿ ಸಂಪಾದಿಸುವುದು ಸೂಕ್ತ.

ತಾಯಿ ತಂದೆಯರು ಮಕ್ಕಳಿಗಾಗಿ ಏನನ್ನು ಬೇಕಾದರು ತ್ಯಾಗ ಮಾಡಲು ಸಿದ್ಧರಿರುತ್ತಾರೆ. ಅದಕ್ಕೆ ತಕ್ಕಂತೆ ಮಕ್ಕಳ ಅವರಿಗೆ ವಿಧೇಯರಾಗಿ, ನಮ್ರತೆಯಿಂದ ನಡೆದುಕೊಳ್ಳಬೇಕು ಯಾವ ಸಂದರ್ಭದಲ್ಲೂ ಮಕ್ಕಳು ತಾಯಿ ತಂದೆಯರ ಮನಸ್ಸಿ ನೋವು, ಬೇಸರವಾಗುವಂತೆ ನಡೆದುಕೊಳ್ಳಬಾರದು, ಒಂದ ವೇಳೆ ಕ್ಷಮೆ ಕೇಳಬೇಕಾದ ಸಂದರ್ಭದಲ್ಲಿ ಮಾಡಿದ ತಪ್ಪನ ಒಪ್ಪಿಕೊಂಡು ಕ್ಷಮೆ ಕೇಳಿ ಮುಂದೆ ತಿದ್ದಿಕೊಂಡು ನಡೆಯ ವುದಾಗಿ ಭರವಸೆ ನೀಡಿ ಅವರಿಗೆ ನೆಮ್ಮದಿ ಉಂಟಾಗುವಂ ಮಾಡಬೇಕು.

ತಾಯಿ-ತಂದೆಯರು ಮಕ್ಕಳ ಬೇಜವಾಬ್ದಾರಿಯ ಕೆಲಸಗಳಿ ಕೆಲವು ವೇಳೆ ಕೋಪಗೊಂಡು ಬೈದಾಗ ಬೈಯಿಸಿಕೊಳ್ಳಬೇಕು ತಮ್ಮ ಮಕ್ಕಳಿಗೆ ತಾವು ಬುದ್ಧಿ ಕಲಿಸದೆ ಬೇರೆಯವರಿಗೆ ಕಲಿಸಲ ಸಾಧ್ಯವೇ? ಮಕ್ಕಳನ್ನು ಪ್ರೀತಿಸುವಂತೆಯೇ ಪ್ರಾರಂಭ ದಿಂದಲೇ ತಪ್ಪು ತಿದ್ದಿ ಒಳ್ಳೆಯ ಮಾರ್ಗಕ್ಕೆ ತರಲು ಪ್ರಯತ್ನಿಸ ವುದು ಪಾಲಕರ ಕರ್ತವ್ಯ.

ಮಗುವಿನ ಬೆಳವಣಿಗೆಯನ್ನು ಸೇವಕಿಗೆ ಒಪ್ಪಿಸಿದ್ದರಿಂ ಮನೆಯ ಮಾಣಿಕ್ಯವಾದ ಮಗುವನ್ನು ಕಡೆಗಂಡು ತಂ ತಾಮಂದಿರು ತಾವು ಸಂತೋಷದಲ್ಲಿ ಕಾಲ ಕಳೆಯುವುದುಂಟು ತಾಯಿ-ತಂದೆ ಬರುವಷ್ಟರಲ್ಲೇ ಮಗು ಮಲಗುತ್ತಿದ್ದ ಕಾರಣ ಅವರನ್ನು ನೋಡುವ ಮಾತನಾಡಿಸುವ, ಜೊತೆಯಲ್ಲಿ ಕುಳಿತ

ಊಟಮಾಡುವ ಅವಕಾಶಗಳು ಕಡಿಮೆಯಾದ್ದರಿಂದ ಮಕ್ಕಳ ಬಗ್ಗೆ ತಾಯಿ ತಂದೆಯರು ತೋರಬೇಕಾದ ಪ್ರೀತಿವಾತ್ಸಲ್ಯಗಳಿಂದ ವಂಚಿತರಾಗಿ, ಚಿಕ್ಕವಯಸ್ಸಿನಲ್ಲಿ ಮತ್ತು ಮುಂದಿನ ಜೀವನದಲ್ಲಿ ಬೆಳವಣಿಗೆಗಳಲ್ಲಿ ಬದಲಾವಣೆಗಳಾಗಲು ಅವಕಾಶ ಉಂಟಾಗಿ ತಾಯಿ ತಂದೆಯವರಿಂದಲೂ ದೂರವಾಗಿ ಮಗು ಮುಂದೆ ದುಷ್ಟ ವ್ಯಕ್ತಿಯಾಗಬಹುದು.

ಮನೆಯಲ್ಲಿ ಮಕ್ಕಳು ಓದುತ್ತಿರುವ ಸಮಯದಲ್ಲಿ ದೂರದರ್ಶನ, ರೇಡಿಯೋ ಅಥವಾ ಟೇಪ್‌ರಿಕಾರ್ಡರ್ ಹಾಕಿ ಹೆಚ್ಚಿನ ಶಬ್ದ ನೀಡಿ ವ್ಯಾಸಂಗಕ್ಕೆ ಭಂಗ ತರಬಾರದು. ಇದರಿಂದ ಮಕ್ಕಳಿಗೆ ಓದುವುದರಲ್ಲಿದ್ದ ಆಸಕ್ತಿ ಕುಗ್ಗಿ ಬೇಸರ ಮಾಡಿಕೊಂಡು ಪುಸ್ತಕ ಮುಚ್ಚಿಟ್ಟು ತಾವೂ ದೂರದರ್ಶನದ ಮುಂದೆ ಕುಳಿತು ಕಾಲ ಕಳೆಯುವರು. ಹೀಗೆ ಮಾಡುವುದರಿಂದ ನಾವೇ ನಮ್ಮ ಮಕ್ಕಳ ಅಭಿವೃದ್ಧಿಯಲ್ಲಿ ಅಡಚಣೆ ಮಾಡಿ ಕೆಡಿಸಿದಂತಾಗುವುದು.

ತಾಯಿ ತಂದೆಯರು ಎಂತಹ ಸಂದರ್ಭದಲ್ಲೂ ಮಕ್ಕಳ ಎದುರಿಗೆ ಯಾವ ಸಮಸ್ಯೆಯ ಬಗ್ಗೆಯೂ ಜಗಳವಾಡಿ ಕೂಗಾಡಬಾರದು, ಇದು ಮಕ್ಕಳ ಮನಸ್ಸಿನ ಮೇಲೆ ದುಷ್ಪರಿಣಾಮ ಬೀರುವುದು. ಅಂತಹ ವಿಚಾರಗಳಿದ್ದರೆ ಮಕ್ಕಳು ಹೊರಗಡೆ ಹೋದಾಗಲೋ ಅಥವಾ ಮಲಗಿದ್ದಾಗಲೋ ಮೆಲ್ಲನೆ ಮಾತಾಡಿ ತೀರ್ಮಾನ ತೆಗೆದುಕೊಳ್ಳುವುದು ಸೂಕ್ತ.

ಮಕ್ಕಳ ಓದುವ ಕೋಣೆ, ಸ್ಥಳ, ರೀತಿಗಳನ್ನು ಬದಲಾಯಿಸಬಾರದು ಒಂದೇ ಪುಸ್ತಕ (ಪಾಠ)ವನ್ನು ಸತತವಾಗಿ ಓದಲು ಬೇಸರವಾದಾಗ ಸ್ವಲ್ಪ ಹೊತ್ತು ಮನರಂಜನೆಯಲ್ಲಿ ಸಮಯ ಕಳೆದು ಅನಂತರ ಬೇರೆ ಪಾಠವನ್ನು ಓದುವ ಅಭ್ಯಾಸಮಾಡಿಕೊಳ್ಳಬೇಕು. ಓದುವ ಕೊಠಡಿಯಲ್ಲಿ ದೇವರ ಅಥವಾ

ಮಹಾತ್ಮರ ಚಿತ್ರಪಟಗಳನ್ನು ಇಟ್ಟುಕೊಂಡು ನಮಸ್ಕರಿ
ಸುವುದರಿಂದ ಶ್ರದ್ಧೆ ಭಕ್ತಿ ಮತ್ತು ಸ್ಫೂರ್ತಿಗಳುಂಟಾ
ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮ ಉಂಟಾಗುವುದು

ತಾಯಿ ತಂದೆಯರು 'ಚಿಕ್ಕ ಸಂಸಾರ ಚೊಕ್ಕ ಸಂಸಾ
ಎಂಬುದನ್ನು ಅರಿತುಕೊಳ್ಳಬೇಕು. ಕಡಿಮೆ ಮಕ್ಕಳಿದ್ದರೆ ಅವ
ವಿದ್ಯೆ ಮತ್ತು ಅಭಿವೃದ್ಧಿಗೆ ಹೆಚ್ಚಿನ ಗಮನಕೊಡಲು ಸಾಧ್
ವಾಗುವುದು. ಸಂಪಾದನೆಗಿಂತ ಖರ್ಚು ಹೆಚ್ಚಿದಾಗ ಸಂಸಾ
ಸಾಗಿಸುವುದು ಕಷ್ಟ. ಆಗ ಸಾಲದಹೊರೆ ಹೊತ್ತು ಬಾಳು
ದಕ್ಕೆ ಶ್ರಮವಾಗುವುದು. ಮಕ್ಕಳನ್ನು ಮರೆಯದೆ ಹೆಚ್ಚಿ
ವಿದ್ಯಾವಂತರನ್ನಾಗಿ ಮಾಡಬೇಕಾದ್ದು ತಾಯಿ-ತಂದೆಯ
ಪ್ರಮುಖ ಕರ್ತವ್ಯ.

## ಉದ್ಯೋಗದಲ್ಲಿರುವ ತಾಯಿ ತಂದೆಯರ ಮಕ್ಕ
## ಅಭಿವೃದ್ಧಿಯಲ್ಲಿ ಸೇವಕಿ-ಸೇವಕರ ಪಾತ್ರ

ಇಂದಿನ ದುಬಾರಿ ಖರ್ಚಿನ ಕಾಲದಲ್ಲಿ ತಾಯಿ-ತಂದೆ ಇಬ್ಬರ
ಕೆಲಸಕ್ಕೆ ಸೇರುವುದು ಅನಿವಾರ್ಯ. ಆಗ ಇಬ್ಬರೂ ತಮ
ತಮ್ಮ ಕಚೇರಿಗಳಿಗೆ ಹೋಗುವಾಗ ಮಗುವಿನ ಮೇ
ಚಾರಣೆಗೆ ಒಬ್ಬ ಸೇವಕಿ-ಸೇವಕರನ್ನು ನೇಮಿಸುವುದರಿಂದ ತಾ
ತಂದೆಯರ ಪ್ರೀತಿ ವಾತ್ಸಲ್ಯಗಳಿಂದ ಮಗು ವಂಚಿತವಾಗುವುದ
ಅಲ್ಲದೆ ಕೆಲಸದವರ ಅವ್ಯವಹಾರ ಅಚಾತುರ್ಯ ವರ್ತನೆಗಳಿ
ಮಗುವಿನ ಅಭಿವೃದ್ಧಿಯಲ್ಲಿ ಬಹಳ ಬದಲಾವಣೆಗಳಾಗು
ದುಂಟು. ಅಂದರೆ ಮಗುವಿನ ಆಟ, ಅಳು, ಗಲಾಟೆಗಳಿ
ದೂರಾಗಿ ಸ್ವತಂತ್ರಳಾಗಿರಲು ಸೇವಕಿಯು ಹಾಲಿನಲ್ಲಿ ನಿ
ಮಾತ್ರೆಗಳನ್ನು ಹಾಕಿ ಕುಡಿಸಿ ಅನಾವಶ್ಯಕವಾಗಿ ಮಲಗಿಸು

ದರಿಂದ ಮಗುವಿನ ಮಾನಸಿಕ ಬೆಳವಣಿಗೆಯ ಮೇಲೆ ದುಷ್ಪರಿಣಾಮವಾಗಿ 'ಮಂದಬುದ್ಧಿ' ಅಥವಾ 'ಔಷಧಕ್ಕೆ ಶರಣಾದ ಮಗುವಾಗಬಹುದು. ಅಷ್ಟೇ ಅಲ್ಲದೆ ಕೆಲವು ವೇಳೆ ಸೇವಕರು ಆಡುವ ಕೆಟ್ಟ ಮಾತುಗಳು. ಬೈಗುಳಗಳನ್ನು ಕಲಿತು ಮುಂದಿನ ಬಾಳಿನ ಮೇಲೆ ಅದು ಪ್ರಭಾವ ಬೀರುವುದುಂಟು.

ವಿವಾಹ ವಿಚ್ಛೇದನ ಪಡೆದ ತಾಯಿ–ತಂದೆಯರು ತಮ್ಮ ಪ್ರೀತಿಯ ಮಕ್ಕಳನ್ನು ನ್ಯಾಯಾಲಯದ ತೀರ್ಪಿನಂತೆ ಪೋಷಿಸಬೇಕಾದರೂ 'ಮಕ್ಕಳ ಮನಸ್ಸಿನ ಮೇಲೆ ಇದು ಗಾಢ ಪರಿಣಾಮ ಬೀರುವುದು'.

ಒಂದು ತಿಂಗಳು ತಾಯಿಯ ಹತ್ತಿರವೂ ಅನಂತರ ಒಂದು ತಿಂಗಳು ತಂದೆಯ ಪೋಷಣೆಯಲ್ಲಿ ಇದ್ದರೂ ತಾಯಿ ಬಿಟ್ಟು ಇರಲಾರದ ಹೆಣ್ಣು ಮಗು ತಂದೆಯಿಂದ ದೂರವಿರಲು ಇಚ್ಛಿಸಿದ ಗಂಡು ಮಗುವಿನ ಬೆಳವಣಿಗೆಯಲ್ಲಿ ಬಹಳ ಬದಲಾವಣೆಯಾಗುವ ಪ್ರಸಂಗಗಳುಂಟು.

## ತಾಯಿ ತಂದೆಯರ ಕರ್ತವ್ಯಗಳು

### ಶಿಶುಪೋಷಣೆ

ಹೆರಿಗೆಯ ಅನಂತರ ತಾಯಿ ಚೇತರಿಸಿಕೊಂಡು ತನ್ನ ಮೊಲೆ ಹಾಲೂಡಿಸಲು ಪ್ರಾರಂಭಿಸಿ ಕೊನೆಪಕ್ಷ ಒಂದು, ಒಂದೂವರೆ ವರ್ಷಗಳ ತನಕವೂ ಕೊಡಬೇಕು. ಆದರೆ ಐದು ತಿಂಗಳಲ್ಲಿ ಮೃದುವಾದ ಅನಂತರ ಗಟ್ಟಿಯಾದ ಆಹಾರಗಳನ್ನು ಕೊಡಲೇಬೇಕು. ಒಂದು ವರ್ಷದಲ್ಲಿ ಮಗು ನಾವು ತಿನ್ನುವ ಆಹಾರವನ್ನೇ ತಿನ್ನುವ ಅಭ್ಯಾಸ ಮಾಡಿಕೊಳ್ಳಲು ಉತ್ತೇಜನ ನೀಡಬೇಕು. ಯಾವ ಕಾರಣಕ್ಕೂ ತಾಯಿಯ ಹಾಲನ್ನು ನಿಲ್ಲಿಸಿ ಡಬ್ಬದ

ಹಾಲು ಅಥವಾ ಹಸುವಿನ ಹಾಲನ್ನು ಸೀಸೆಯಲ್ಲಿ ಹಾಕಿ ಕುಡಿ ಬಾರದು. ಸೀಸೆಯಲ್ಲಿ ಹಾಲನ್ನು ಕೊಡುವುದರಿಂದ ತಾಯಿ ಹಾಲಿನಲ್ಲಿ ದೊರೆಯುವ ಪೌಷ್ಟಿಕಾಂಶಗಳು ಮತ್ತು ರೋ ನಿರೋಧಕ ಶಕ್ತಿಯ ಅಂಶಗಳ ಕೊರತೆಯುಂಟಾಗಿ ಅನೇ ರೋಗಗಳಿಗೆ ಮಕ್ಕಳು ತುತ್ತಾಗಿ ದೇಹದ ಬೆಳವಣಿಗೆ ಸರಿಯಾ ಆಗುವುದಿಲ್ಲ. ಇದಕ್ಕೆಲ್ಲ ತಾಯಿಯು ವರ್ತನೆ ನನ್ನಲ್ಲಿ ಹಾಲ ಬರುತ್ತಿಲ್ಲ ಎಂದು ತಿಳಿದುಕೊಳ್ಳುವುದೇ ಕಾರಣ. ಪ್ರಕೃತಿಯ ಕೊಡುಗೆಯಾದ ಎದೆಹಾಲನ್ನು ಪ್ರತಿಯೊಬ್ಬ ತಾಯಿಯ ಮಗುವಿಗೆ ಕುಡಿಸಲೇಬೇಕು. ಮಗುವಿಗೆ ಬೇಕಾದಷ್ಟು ಹಾಲ ಪ್ರತಿದಿನವೂ ತಾಯಿಯಲ್ಲಿ ಇರುತ್ತದೆ.

### ರೋಗನಿರೋಧಕ ಮುನ್ನೆಚ್ಚರಿಕೆ ಕ್ರಮಗಳು

ಶಿಶು ಜನನವಾದ ಎರಡನೆಯ ದಿನದಿಂದ ಐದು ವರ್ಷಗಳತನ ನಿಗದಿತ ರೋಗನಿರೋಧಕ ಚುಚ್ಚುಮದ್ದು ಮತ್ತು ಲಸಿ ಗಳನ್ನು ಕ್ರಮವಾಗಿ ಹಾಕಿಸಿ ಮಗುವಿಗೆ ಕ್ಷಯ, ಪೋಲಿಯೊ ಗಟ್ಟಮಾರಿ, ನಾಯಿಕೆಮ್ಮು, ಧನುರ್ವಾಯು, ದಡಾರ ಮತ್ತು ವಿಷಮಶೀತಜ್ವರ (ಟೈಫಾಯಿಡ್) ನಂತಹ ರೋಗಗಳು ಮಕ್ಕಳಿ ಬಾರದಂತೆ ಮುನ್ನೆಚ್ಚರಿಕೆ ಕ್ರಮಗಳನ್ನು ತಾಯಂದಿರು ವಹಿಸ ವುದರಿಂದ ಮಗು ಆರೋಗ್ಯವಂತ, ದೃಢಕಾಯವಾಗಲು ಮತ್ತು ಮುಂದಿನ ಅಭಿವೃದ್ಧಿಗೆ ಆಶ್ರಯನೀಡಿದಂತಾಗುವುದು.

### ಲಿಂಗಭೇದ ತಾರತಮ್ಯ

ಹೆಣ್ಣು-ಗಂಡು ಎಂಬ ಭೇದಭಾವದಿಂದ ನೋಡದೆ, ಮಾ ನಾಡದೆ, ಬೆಳಸದೆ 'ಇಬ್ಬರೂ ಒಂದೇ' ಎಂಬುದನ್ನು ಮೊದ

...ಂದಲೂ ಬೆಳಸಿಕೊಂಡು ಬರಬೇಕು. ಇಲ್ಲವಾದರೆ ಈ ...ಾರತವು ಹೆಣ್ಣು ಮಕ್ಕಳ ಮನಸ್ಸಿನ ಮೇಲೆ ಹೆಚ್ಚಿನ ...ರಿಣಾಮವನ್ನುಂಟುಮಾಡುವುದು. ಇಂದಿನ ಕಾನೂನು ...ಂದೆಯ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಸಮಪಾಲು ಪಡೆಯುವ ...ಕ್ಕು ನೀಡಿರುವುದರಿಂದ ಮುಂದೆ ಹೆಣ್ಣು ಮಕ್ಕಳನ್ನು ...ಡೆಗಣಿಸುವ ಪ್ರಸಂಗಗಳು ಮರೆತುಹೋಗಬಹುದು.

### ಲೈಂಗಿಕ ಶಿಕ್ಷಣ

ಹೆಣ್ಣು ಮಕ್ಕಳಿಗೆ ಪ್ರಾರಂಭದಿಂದಲೂ ಬೆಳವಣಿಗೆ ಮುಂದು ...ವರಿದಂತೆ ಆರೋಗ್ಯ, ಆರೈಕೆ, ನಡವಳಿಕೆ, ಲೈಂಗಿಕ ಮತ್ತು ...ತಾಯ್ತನದ ಜವಾಬ್ದಾರಿಗಳ ಬಗ್ಗೆ ತಿಳುವಳಿಕೆ ನೀಡಬೇಕಾದುದು ...ತಾಯಂದಿರ ಕರ್ತವ್ಯ. ಇಂದಿನ ಆಧುನಿಕ ಸಮಾಜದಲ್ಲಿ ಶಾಲೆಯ ...ಪಾಠಗಳಲ್ಲೇ 'ಲೈಂಗಿಕ ಶಿಕ್ಷಣ'ವನ್ನು ನೀಡುವ ಪ್ರಾಮುಖ್ಯತೆ ...ಕುರಿತು ಶಿಕ್ಷಣ ತಜ್ಞರು ಚಿಂತಿಸುತ್ತಿದ್ದಾರೆ.

ಮಗು ಬೆಳೆದಂತೆ ಲಿಂಗಭೇದಗಳನ್ನು ಅರಿತುಕೊಳ್ಳುವುದರಿಂದ ...ಮನೆಯಲ್ಲಿ ತಾಯಿ ತಂದೆಯರು ಇಲ್ಲದಿರುವಾಗ ಕೆಲಸದ ...ಹುಡುಗಿ/ಹುಡುಗರೊಡನೆ ಬೆಳೆದ ಮಕ್ಕಳನ್ನು ಬಿಡುವುದು ಈ ...ಕಾಲದಲ್ಲಿ ಕಷ್ಟವಾದ ಕೆಲಸ.

ಹೆಣ್ಣಿಗೆ ಮೊದಲು ತಾಯಿಯ ಗರ್ಭಕೋಶವೆ ಶಿಶುವಿಗೆ ...ಒಂದು 'ಒಳಮನೆ'ಯಾಗಿರುತ್ತದೆ. ಸಾಸಿವೆಯಷ್ಟು ಸಣ್ಣ ...ದಾಗಿದ್ದು ತಾಯಿಯ ದೇಹದಿಂದ ದೊರೆತ ಪೌಷ್ಟಿಕಾಂಶಗಳಿಂದ ...ಬೆಳೆದು ಒಂಬತ್ತು ತಿಂಗಳಲ್ಲಿ ಎರಡೂವರೆಯಿಂದ ಮೂರು ಕೆ.ಜಿ. ...ತೂಕದ ಮಗುವಾಗಿ ಜನನವಾಗುವುದು.

ಹೀಗೆ ನಂತರ ಹೊಕ್ಕಳು ಬಳ್ಳಿಯನ್ನು ಕತ್ತರಿಸಿ. ವ
ವನ್ನು ತಾಯಿಂದ ಬೇರ್ಪಡಿಸಿದರೂ ಹೊರಗಿನ ಮನೆ
ಬೆಳೆಯಲು ಬೇಕಾದ ಸೌಲಭ್ಯಗಳು ತಾಯಿಂದಲೇ ದೊರೆ
ವುವು. ಪ್ರಕೃತಿಯ ನಿಯಮದಂತೆ ಶೀತ, ಗಾಳಿ, ಬೆ
ಮಳೆ ಮುಂತಾದವುಗಳಿಂದ ರಕ್ಷಿಸಲ್ಪಡುವುದು. ಜೀವ
ಅವಶ್ಯಕತೆಗೆ ಬೇಕಾದ ಹಾಲು, ನೀರು ಮತ್ತು ಆಹಾ
ದೊರೆಯುವುದು. ಶಿಶುವಿನ ಶಿಕ್ಷಣ ಹುಟ್ಟಿದಾಗಲೇ ಪ್ರಾ
ವಾಗುವುದರಿಂದ ಮೊಟ್ಟಮೊದಲ ಗುರುಗಳೇ ತಾಯಿ
ಯರು. ಅನಂತರ ಹಂತ ಹಂತವಾಗಿಯೇ ಶಿಕ್ಷಣ ದೊರೆ
ವುದರಲ್ಲಿ ತಂದೆಯ ಪಾತ್ರ ಒಬ್ಬ ನಾಯಕನಂತಿರುವ
ಕಾರಣ ತಂದೆಯ ನಡೆ, ನುಡಿ, ವ್ಯವಹಾರಗಳೆಲ್ಲವೂ ಕುಟ
ದಲ್ಲಿ, ಜನಾಂಗದಲ್ಲಿ ಮತ್ತು ಸಮಾಜದಲ್ಲಿ ಎದ್ದು ಕಾಣುವ
ಆದರೆ ಇಂದಿನ ಸಮಾಜದಲ್ಲಿ ತಂದೆ ಅವಿಶ್ರಾಂತ ಕಾರ್ಯ
ನಾದ ಕಾರಣ ಯಾವಾಗಲೂ ಹೊರಗಡೆ ಇರುವುದರಿಂದ
ವರ್ತನೆ ವ್ಯವಹಾರಗಳೇನೆಂಬುದನ್ನು ಅಷ್ಟು ಸುಲಭ
ತಿಳಿಯಲಾಗದು. ಸಾಮಾಜಿಕ ಸೌಲಭ್ಯಗಳಂತೆ ಮಗು
ಮೊಟ್ಟಮೊದಲನೆಯ ಸಂಬಂಧ ಸಹವಾಸವನ್ನು ತಾಯಿಯೊ
ಪ್ರಾರಂಭಿಸಿ ಮುಂದೆ ತಂದೆ, ಸಹೋದರ ಸಹೋದರಿಯರೊ
ಮುಂದುವರಿಸುವುದರಿಂದ ಮನೆಯಲ್ಲೇ ಒಂದು ಅಭಿಪ್ರಾ
ತಿಳಿಯುವ ತಳಹದಿ ಉಂಟಾಗುವುದರಿಂದ ಸುಲಭವಾಗಿ
ಪ್ರಜೆಗಳೊಡನೆ ಬೆರೆತು ಪಾಲುಗೊಳ್ಳುವುದು. ನವಶಿ
ಮನಃಶಾಸ್ತ್ರದ ಸೌಲಭ್ಯಗಳಾದ ತಾಯಂದಿರ ಮೃದು ಮ
ಬೆಚ್ಚನೆ ಇರಲು ಶಾಖ ಮತ್ತು ಅನುಭವದಿಂದ ಕೂಡಿದ ರ
ಮತ್ತು ಸಮಾಧಾನದ ಶ್ರದ್ಧೆ ದೊರೆಯುವುದು. ಇನ

ಮಕ್ಕಳು ಹೆಚ್ಚಿನ ಭದ್ರತೆಯನ್ನು ಮನೆಯಲ್ಲೇ ಮತ್ತು ತಾಯಿ-ತಂದೆಗಳ ಒಡನಾಟದಿಂದ ಪಡೆಯುವರು. ಮೊದಲು ಶಾಲೆಗೆ ಸೇರಿಸಿದಾಗ ಅಥವಾ ವಿವಾಹ ವಿಚ್ಛೇದನ ಪಡೆದ ದಂಪತಿಗಳಿಂದ ಇದ್ದಕ್ಕಿದ್ದಂತೆ ಬೇರ್ಪಡಿಸಿದಾಗ ಮಕ್ಕಳ ಮನಸ್ಸಿನ ಮೇಲೆ ಮಹತ್ವಪೂರ್ಣ ಪರಿಣಾಮವಾಗುವುವು.

ತಾಯಿ ಚಿಕ್ಕಂದಿನಿಂದಲೇ ಮಗಳಿಗೆ ಸಂದರ್ಭ ದೊರೆತಾಗ ಮನೆ, ಕುಟುಂಬ, ಮತ್ತು ಸಮಾಜದಲ್ಲಿ ಒಂದು ಹೆಣ್ಣಿಗೆ ಸ್ಥಾನಮಾನಗಳೇನು ?—ಮಗಳಾಗಿ, ಹೆಂಡತಿಯಾಗಿ, ಸೊಸೆಯಾಗಿ, ತಾಯಾಗಿ, ಅಜ್ಜಿ ಮತ್ತು ಅತ್ತೆಯಾಗಿ ಹಂತಹಂತವಾಗಿ ದೊರೆಯುವ ಸ್ಥಾನಗಳಲ್ಲಿ ಹೆಣ್ಣಿನ ಕರ್ತವ್ಯ ಮತ್ತು ಹೊಣೆಗಾರಿಕೆಯ ಮಹತ್ವ ತಿಳಿಸಬೇಕು. ಮನೆತನದ ಗೌರವಕ್ಕೆ ಕುಂದು ಬಾರದಂತೆ ನಡೆದುಕೊಳ್ಳಲು ಮಾರ್ಗದರ್ಶನ ನೀಡಿ ಆದರ್ಶ ಮಹಿಳೆಯಾಗುವಂತೆ ಪ್ರೇರೇಪಿಸಿ, ಸ್ಫೂರ್ತಿನೀಡಬೇಕು.

## ೩. ಮಗುವಿನ ಬೆಳವಣಿಗೆಯಲ್ಲಿ ಶಾಲೆಯ ಪಾ

### ಶಾಲೆಯ ಪಾತ್ರ

ಪ್ರತಿಯೊಂದು ಮಗುವೂ ಶಾಲೆಯಲ್ಲಿ ದಿನವೂ ೪ ರಿಂದ
ಗಂಟೆಗಳಂತೆ ಸುಮಾರು ೧೦-೧೫ ವರ್ಷಗಳು ಕಳೆಯುವು
ಆದ್ದರಿಂದ ಶಾಲೆಯು ಮಗುವಿನ ಅಭಿವೃದ್ಧಿಯಲ್ಲಿ ಪ್ರಬ
ಪ್ರಭಾವ ಬೀರುವುದು. ಮಗುವು ತಿಳುವಳಿಕೆ, ವ್ಯವಹಾ
ಜ್ಞಾನ, ಇತರ ವಿಚಾರಗಳ ಬಗ್ಗೆ ಆಲೋಚಿಸಲು, ಅರ್ಥಮಾ
ಕೊಳ್ಳಲು ತರ್ಕಮಾಡಿ, ಬುದ್ಧಿಶಕ್ತಿಯನ್ನು ನೆನಪು ಮಾ
ಕೊಂಡು "ಜ್ಞಾನ ಸಂಪಾದನೆ"ಗೆ ಸಹಾಯಕವಾಗುವು
ಆಗಾಗ್ಗೆ ಶಾಲೆಯಲ್ಲಿ ಹೊಸ ವಿಚಾರಗಳ ಬಗ್ಗೆ ಚರ್ಚಾಕ
ಗಳು ಏರ್ಪಾಡಾಗುವುದರಿಂದ ಬೇರೆ ಮಕ್ಕಳು ಬುದ್ಧಿಶಕ್ತಿ
ಮಾತುಗಳು ಮಗುವಿನ ಅಭಿವೃದ್ಧಿಗೆ ಉಪಯುಕ್ತವಾ
ತ್ತವೆ.

ಹಿಂದಿನ ದಿನ ಶಾಲೆಯಲ್ಲಿ ಕೊಟ್ಟ "ಹೋಂ ವರ್ಕ್"
ಸಕಾಲದಲ್ಲಿ ಮನೆಯಲ್ಲೇ ಬರೆದು ಮುಗಿಸಿ ಸಮಯಕ್ಕೆ
ಯಾಗಿ ಪ್ರತಿ ನಿತ್ಯವೂ ಶಾಲೆಗೆ ಹಾಜರಾಗಲು ಸಿದ್ಧವಾಗಿ
ಗುರುಗಳ ಪ್ರೀತಿಗೆ ಪಾತ್ರರಾಗುವುದು. ಇದರಿಂದ ಚಿಕ್ಕ
ನಿಂದಲೇ "ಜವಾಬ್ದಾರಿಯ ಪ್ರಜ್ಞೆಯ" ಅರಿವಾಗುವು
ಜೊತೆಗೆ ಮನೆಯಲ್ಲಿರುವ ರಕ್ಷಣೆಯ ವಾತಾವರಣದಲ್ಲೂ ಬೆಳೆ
ವುದು.

ಶಾಲೆಗೆ ಅಕ್ಕ ಪಕ್ಕದ ಊರುಗಳಿಂದ ನಾನಾ ಕುಟು
ಗಳಿಂದ ಎಲ್ಲಾ ಜನಾಂಗಗಳ ಬಡವ-ಬಲ್ಲಿದರ ಮಕ
ಬರುವರು; ಪ್ರಾರ್ಥನೆಗೆ ಎಲ್ಲರೂ ಒಂದು ಕಡೆ ಸೇರಿ ಅನ

ತಮ್ಮತಮ್ಮ ತರಗತಿಗೆ ತೆರಳುವರು. ಸಕಾಲಕ್ಕೆ ಬಂದು ಉಪಾಧ್ಯಾಯರು ಹೇಳುವ ಪಾಠಗಳನ್ನು ಕೇಳುವರು. ಮಧ್ಯಾಹ್ನ ಊಟದ ವೇಳೆ ತೆಗೆದುಕೊಂಡು ಬಂದಿರುವ ತಿಂಡಿ ಯನ್ನು ಸ್ನೇಹಿತರೊಡನೆ ಸೇರಿ ಯಾವ ಭೇದಭಾವವಿಲ್ಲದೆ ತಿಂದು ತೃಪ್ತಿ ವ್ಯಕ್ತಪಡಿಸುವರು. ಈ ಸ್ನೇಹ ಸೌಹಾರ್ಧ ಮಕ್ಕಳಲ್ಲಿ ಬೆಳೆದು ಮುಂದಿನ ತಮ್ಮ ಜೀವನದಲ್ಲಿ ರೂಢಿಸಿ ಕೊಂಡು ಸಮಾಜದಲ್ಲಿ ಉತ್ತಮ ಪ್ರಜೆಗಳಾಗಿ ಬಾಳಲು ತಳಹದಿ ಹಾಕಿದಂತಾಗುವುದು.

ವಿರಾಮದಲ್ಲಿ ಮತ್ತು ತರಗತಿಗಳು ಮುಗಿದ ನಂತರ ಮಕ್ಕಳು ಶಾಲೆಯ ಮೈದಾನದಲ್ಲಿ ಒಟ್ಟಿಗೆ ಸೇರಿ ಆಟವಾಡುವಾಗ ವ್ಯಾಯಾಮ ತರಬೇತಿಯ ಉಪಾಧ್ಯಾಯರ (ಪಿ.ಟಿ.ಟೀಚರ್) ರಿಂದ ಪ್ರೇರಣೆ, ಮಾರ್ಗದರ್ಶನ, ಶಿಕ್ಷಣ ದೊರೆತು "ಶಿಸ್ತಿನ ಆವಶ್ಯಕತೆ'' ಬಗ್ಗೆಯೂ ಅರಿವು, ಆಸಕ್ತಿಯಿಂದ ಕ್ರೀಡಾ ಪಟುಗಳಾಗಿ ವ್ಯಾಯಾಮದಿಂದ ದೇಹಾರೋಗ್ಯವು ಉತ್ತಮ ವಾಗುವುದು. ಆಟಗಳಲ್ಲಿ ಗೆದ್ದವರಿಗೆ ಪ್ರಶಸ್ತಿಪತ್ರ, ಪದಕ ಗಳನ್ನು ನೀಡುವುದರಿಂದ ಮಕ್ಕಳಿಗೆ ಸ್ಫೂರ್ತಿ ನೀಡಿದಂತಾಗು ವುದು. ಅಲ್ಲದೇ ತಾಯಿ-ತಂದೆ ಉಪಾಧ್ಯಾಯರುಗಳಿಗೆ, ವ್ಯಾಸಂಗ ಮಾಡಿದ ಶಾಲೆಗೆ ಕೀರ್ತಿ ತಂದಾಗ ಎಲ್ಲರ ಪ್ರಶಂಶೆಗೂ ಪಾತ್ರರಾಗುವರು.

ಉಪಾಧ್ಯಾಯರುಗಳು ರಜಾ ಬಂದಾಗ ಮಕ್ಕಳನ್ನು "ವನ ವಿಹಾರ''ಕ್ಕೆ (ಪಿಕ್‌ನಿಕ್‌ಗೆ) ಕರೆದುಕೊಂಡು ಹೋಗಿ ಶಿಬಿರಗಳಲ್ಲಿ ತಂಗುವುದರಿಂದ ಎಲ್ಲಾ ಜಗೆಯ ವಿದ್ಯಾರ್ಥಿಗಳು ಒಂದುಗೂಡಿ ಪ್ರಕೃತಿಯ ಸೌಂದರ್ಯವನ್ನು ಕಂಡು ಪಿವರಣೆ

ಗಳನ್ನು ಕೇಳಿ ಇತರರೊಡನೆ ಸಂತೋಷವನ್ನು ಹಂಚಿಕೊಳ್ಳು
ಭಾಗ್ಯ ದೊರೆಯುವುದು. ವನವಿಹಾರದಲ್ಲಿ ಜಾತಿ ಭೇದಗಳನ
ದೂರ ಮಾಡಿ ಮಕ್ಕಳು ತಮ್ಮ ಪೋಷಕರುಗಳಲ್ಲಿರು
ಮಡಿವಂತಿಕೆಯನ್ನು ಮರೆತು ''ಸಹ ಭೋಜನ''ದಲ್ಲಿ ಪಾಲ
ಗೊಂಡು ಸಹಕರಿಸುವ ಸದಾವಕಾಶಗಳನ್ನು ಕಲ್ಪಿಸಿದಂತಾ
ಮಕ್ಕಳಲ್ಲಿ "ಮೇಲು ಕೀಳು" ಮುಂತಾದ ಭೇದಭಾವಗಳನ್ನು
ದೂರವಾಗಿ, ''ನಾವೆಲ್ಲರೂ ಒಂದೇ'' ಎಂಬ ಭಾವನೆ ಚಿಕ್ಕಂ
ನಿಂದಲೂ ಮೂಡಿ ಬಂದು ಸಮಾಜದಲ್ಲಿ ಸ್ನೇಹ ಸೌಹಾರ್ದ
ಗಳಿಂದ ಬಾಳಲು ಸಹಾಯಕವಾಗುವುದು.

ವೈದ್ಯರು ಶಾಲೆಗಳಿಗೆ ಕ್ರಮವಾಗಿ ಭೇಟಿ ನೀಡಿ ಮಕ್ಕಳನ್ನು
ಪರೀಕ್ಷಿಸಿ, ಇರುವ ದೋಷಗಳನ್ನು ತಿಳಿದು, ಸೂಕ್ತ ಚಿಕಿತ್ಸೆ
ಮತ್ತು ಸಲಹೆ ನೀಡುವುದಲ್ಲದೆ, ಕೆಲವು ಗುಪ್ತ (ಸಿ.ಹೆಚ್.ಡಿ.
ಕಾಯಿಲೆಗಳಿರುವ ಮಕ್ಕಳನ್ನು ತಜ್ಞ ವೈದ್ಯರ ಪರೀಕ್ಷೆ ಮತ್ತು
ಅಭಿಪ್ರಾಯ ತಿಳಿಯಲು ಮಾರ್ಗದರ್ಶನ ನೀಡುವರು. ಮಾರ
ರೋಗಗಳ ಬಗ್ಗೆ ತಿಳುವಳಿಕೆ ನೀಡಿ ''ಮಕ್ಕಳು ಆರೋಗ್ಯ
ವಂತರಾಗಿರಲು ಸೂಕ್ತ ಸ್ಥಳವೇ ಶಾಲೆಯಾಗುವುದು.

ಶಾಲೆಯಲ್ಲಿ ಆಗಾಗ್ಗೆ ಏರ್ಪಡಿಸುವ "ವಸ್ತು ಪ್ರದರ್ಶನ''ಗಳ
ತಮ್ಮ ಕಲಾ ಕೌಶಲ್ಯ ಹಸ್ತ ಚಾತುರ್ಯ ಮತ್ತು ಹವ್ಯಾಸಗಳಾ
ನಾಣ್ಯಗಳನ್ನು ಕೂಡಿಸಿಡುವುದು, ಅಂಚೆ ಚೀಟಿಗಳನ್ನು
ಸಂಗ್ರಹಿಸಿ ಪ್ರದರ್ಶನ ಮಾಡಿ ಅವರುಗಳ ಆಸಕ್ತಿಯನ್ನು
ಇತರರಿಗೂ ತೋರಿಸಿ ಬೇರೆಯುವರಲ್ಲಿ ಸ್ಫೂರ್ತಿ ನೀಡುವ ಅವಕಾ
ದೊರೆತು ಕರಕುಶಲ ಕಲೆಗಳ ಅಭಿವೃದ್ಧಿಯಾಗುವುದು. ಅಲ್ಲ
ಮುಂದೆ ಮಕ್ಕಳು ಬೆಳೆದು ದೊಡ್ಡವರಾದಾಗ ಜೀ
ನೋಪಾಯಕ್ಕೆ ಒಂದು ಒಳ್ಳೆಯ ವೃತ್ತಿಯಾಗುವುದು.

ಸಂಕ್ಷಿಪ್ತವಾಗಿ ಹೇಳುವುದಾದರೆ ಶಾಲೆಗಳು ಮಕ್ಕಳಿಗೆ ಕೇವಲ ಜ್ಞಾನವನ್ನು ನೀಡದೆ ಒಳ್ಳೆಯ ಸ್ವಭಾವ, ಯೋಗ್ಯತೆ, ಬಾಳಿನ ಮಹತ್ವ ಮತ್ತು ವ್ಯಕ್ತಿತ್ವವನ್ನು ವೃದ್ಧಿಪಡಿಸಿಕೊಳ್ಳಲು ಸಿದ್ಧತೆ ಮಾಡುವುವು. ತಾಯಿ-ತಂದೆಯವರು ಮುಂದೆ ಇವುಗಳಿಗೆ ಉತ್ತೇಜನ ನೀಡಬೇಕು.

## ಮಗುವಿನ ಅಭಿವೃದ್ಧಿಯಲ್ಲಿ ಉಪಾಧ್ಯಾಯರ ಪಾತ್ರ

ಶಾಲೆಯಲ್ಲಿ ನೂರಾರು ಮಕ್ಕಳ ಕಣ್ಣುಗಳು ಉತ್ಸಾಹದಿಂದ ತಮ್ಮ ಗುರು-ಹಿರಿಯರ ಉಡುಪು, ನಡತೆ, ಅಭಿನಯ ಮತ್ತು ಕೈಗೊಳ್ಳುವ ಕಾರ್ಯಗಳನ್ನು ಕುತೂಹಲದಿಂದ ನೋಡು ವುದರಿಂದ ಗುರು ಹಿರಿಯರು ಬಹಳ ಎಚ್ಚರಿಕೆಯಿಂದ ವರ್ತಿಸ ಬೇಕು. ಮಗುವಿಗೆ ತಾನು ನೋಡುವುದು, ಕೇಳುವುದು ಸರಿಯೋ ತಪ್ಪೋ ಎಂಬ ವಿವೇಚನಾ ಶಕ್ತಿ ಇಲ್ಲವಾದ ಪ್ರಯುಕ್ತ ಮಕ್ಕಳು ಸುಲಭವಾಗಿ ಗುರುಗಳನ್ನು ಅನುಸರಿಸಿ ಆಚರಣೆಯಲ್ಲೂ ರೂಢಿಸಿಕೊಳ್ಳುವರು, ಮಕ್ಕಳಿಗೆ ಯಾವಾಗಲೂ ಒಂದೇ ರೀತಿಯ ಬೋಧನೆ ನೀಡಲು ಸಾಧ್ಯವಿಲ್ಲ. ಬೋಧನೆಯು ಮಕ್ಕಳಿಂದ ಮಕ್ಕಳಿಗೆ ಮತ್ತು ಸಂದರ್ಭಕ್ಕೆ ತಕ್ಕಂತೆ ಬದಲಾವಣೆ ಆಗುವುದು.

ಉದಾ : ಒಮ್ಮೆ ಶ್ರೀ ರಾಮಕೃಷ್ಣ ಪರಮಹಂಸರು ಆಶ್ರಮ ದಲ್ಲಿ ಪ್ರವಚನ ಮಾಡುತ್ತಿದ್ದರು. ಒಬ್ಬ ಓಡಿಕೊಂಡು ಬಂದು, ಸ್ವಾಮಿ ಹೊರಗಡೆ ಯಾರೋ ನಿಮ್ಮನ್ನು ಬಾಯಿಗೆ ಬಂದಂತೆ ಬೈದು ಹೀಯಾಳಿಸುತ್ತಿದ್ದಾನೆ ಎಂದ. ಆಗ ಪರಮಹಂಸರು "ನೀನು ಅದನ್ನು ಕೇಳಿಕೊಂಡು ಅವನನ್ನು ಹಾಗೆಯೇ ಬಿಟ್ಟು ಸುಮ್ಮನೆ ಬಂದೆಯಾ ಹಿಡಿದು ಹೊಡೆಯಬೇಕಿತ್ತು" ಎಂದರು.

ಸ್ವಲ್ಪ ಹೊತ್ತಿನ ಮೇಲೆ ಮತ್ತೊಬ್ಬ ಬಂದು "ಸ್ವಾಮಿ ಹೊರಗಡೆ ನಿಮ್ಮನ್ನು ಬೈದು ಹೀಯಾಳಿಸುತ್ತಿದ್ದ ವ್ಯಕ್ತಿಯನ್ನು ಹಿಡಿದು ಚೆನ್ನಾಗಿ ಹೊಡೆದೆನು. ಆಗ ಇಬ್ಬರ ಬಟ್ಟೆಗಳು ಹರಿದವು ಮತ್ತು ಇಬ್ಬರಿಗೂ ಗಾಯಗಳಾಗಿ ರಕ್ತ ಬಂತು.". ಎಂದ ತನ್ನ ಹರಿದಬಟ್ಟೆ ಮತ್ತು ರಕ್ತ ತೋರಿಸಿದ. ಆಗ ಪರಮಹಂಸರು ಅವನಿಗೆ ಹೇಳಿದರು "ನೀನು ಏಕೆ ಅವನಿಗೆ ಹೊಡೆದು ರಕ್ತ ಬರಿಸಿ ಬಟ್ಟೆ ಹರಿದೆ. ಅತನ ಬೈಗುಳ ನನಗೆ ತಗುಲಿ ನನ್ನ ಗಾಯ ವಾಗಿ ರಕ್ತ ಬರುತ್ತಿದೆಯೇ ಎಲ್ಲೋ ಗಾಳಿಗೆ ಹೋಗಿರಬೇಕು" ಎಂದರು. ಅದನ್ನು ಗಮನಿಸಿದ ಭಕ್ತನೊಬ್ಬ ಧೈರ್ಯ ಮಾಡಿ ಎದ್ದು ನಿಂತು "ಸ್ವಾಮಿ ತಾವು ಇಬ್ಬರಿಗೂ ಎರಡು ರೀತಿಯ ಬೋಧನೆ ಮಾಡಿದ್ದರ ಅರ್ಥ ಮತ್ತು ವ್ಯತ್ಯಾಸವೇನು" ಎಂದನು. ಆಗ ಪರಮಹಂಸರು "ನನ್ನ ಬೋಧನೆ ಯಾವಾಗಲೂ ಸಂದರ್ಭಕ್ಕೆ ಸೂಚಕ" ಎಂದು ಹೇಳಿ "ಮೊದಲನೆಯವನು ಹೇಡಿ ಅದ್ದರಿಂದ ಧೈರ್ಯ ಬರುವಂತೆ ಉತ್ತೇಜನ ನೀಡುವ ಮಾತುಗಳನ್ನು ಹೇಳಿದರೆ ಎರಡನೆಯವನು ಬಿಸಿ ರಕ್ತದಿಂದ ಕುದಿಯುತ್ತಿದ್ದ ಕೋಪಗಾರ ಅವನಿಗೆ ಸಮಾಧಾನ ಮಾಡಲು ಶಾಂತಿ ಮಾತುಗಳನ್ನು ಹೇಳಿದ್ದೇನೆ" ಎಂದರು. ಹಾಗೇ ಗುರು ಆದವರು ದಡ್ಡರನ್ನು ಚುರುಕು ಮಾಡಿ ಜಾಣರನ್ನಾಗಿಯೂ ಜಾಣರನ್ನು ಅತಿ ಜಾಣರನ್ನಾಗಿಯೂ, ದುಷ್ಟಚಟಗಳನ್ನು ಕಲಿತವರಿಗೆ ಎಚ್ಚರಿಕೆಯ ಮಾತುಗಳನ್ನು ಮೊದಲು ಹೇಳಿ ನಂತರ ದಂಡದ ಸೇವೆ ಮಾಡಿ ಸಂದರ್ಭಕ್ಕೆ ತಕ್ಕಂತೆ ಬುದ್ಧಿ ಹೇಳಿ ತಿದ್ದಬೇಕು.

ಮನೆಯಲ್ಲಿ ಮಕ್ಕಳ ಗಲಾಟೆ ತಡೆಯಲಾಗದೆ ಶಾಲೆ ಸೇರಿಸುತ್ತಾರೆ. ಇಂತಹ ಎಲ್ಲಾ ವಿಧವಾದ ಮಕ್ಕಳನ್ನು

ತರಬೇತಿ ನೀಡಿ ಉತ್ತಮ ಪ್ರಜೆಗಳನ್ನಾಗಿ ಮಾಡುವ ಮೇಷ್ಟ್ರುಗಳ ಸಂಭಾವನೆಯೂ ಪಟ್ಟಶ್ರಮಕ್ಕೆ ತಕ್ಕ ಫಲವೇ ? ಎಂದು ಸರ್ವರೂ ಚಿಂತಿಸಬೇಕಾದ ಸಮಸ್ಯೆ ಮತ್ತು ಕರ್ತವ್ಯ

''ಅನ್ನದಾನ ಶ್ರೇಷ್ಠ, ಅದಕ್ಕಿಂತಲೂ ಬಹುಶ್ರೇಷ್ಠವಾದದ್ದು ವಿದ್ಯಾದಾನ" ಏಕೆಂದರೆ ಅನ್ನದಾನದಿಂದ ತಾತ್ಕಾಲಿಕ ತೃಪ್ತಿ ದೊರೆತರೆ ವಿದ್ಯಾದಾನದಿಂದ ಬದುಕಿರುವ ತನಕವೂ ಸಂತೃಪ್ತಿಯಾಗಿರಬಹುದು.

''ದೇವರಲ್ಲಿ ಗುರುವನ್ನು, ಗುರುವಿನಲ್ಲಿ ದೇವರನ್ನು ಕಾಣುವ ಶಿಷ್ಯನೇ ಧನ್ಯ".

## ಮನರಂಜನೆ

"ಬಾಲ್ಯದ ವಿದ್ಯಾಭ್ಯಾಸ ಮನರಂಜಕವಾಗಿರಲಿ''–ಪ್ಲೇಟೋ.

''ಜನ ಯಾವಾಗಲೂ ಕೆಲಸ ಮಾಡುತ್ತಿರಲಾರರು, ಕಲಿಯುತ್ತಿರಲಾರರು, ಅವರಿಗೆ ಮನರಂಜನೆಯೂ ಬೇಕು''–
ಚಾರಲ್ಸ್ ಡಿಕನ್ಸ್

## ಮನರಂಜನೆಯಲ್ಲಿ ಆಟದ ಪಾತ್ರ

"ಬೊಂಬೆ ಇಲ್ಲದ ಮಗುವೂ, ಮಗುವು ಇಲ್ಲದ ತಾಯಿಯೂ ಒಂದೇ'' ವಿಕ್ಟರ್ ಹ್ಯೂಗೋ.

ಮಗುವಿನ ಬೆಳವಣಿಗೆಯಲ್ಲಿ ಆಟದ ಸಾಮಾನುಗಳ ಪಾತ್ರ ಮಹತ್ವವಾದುದ್ದು. ಆಟದ ಸಾಮಾನುಗಳೊಡನೆ ಆಡುವಾಗ ಸಂತೋಷ ಲವಲವಿಕೆಯಿಂದ ಗಂಟೆಗಟ್ಟಲೇ ಆಡುವುದು.

ಆಟದ ಸಾಮಾನುಗಳನ್ನು ಉಪಯೋಗಿಸುವಾಗ ತನ್ನ ಬುದ್ಧಿ ಆಸೆಗಳಂತೆ ನಡೆದುಕೊಳ್ಳುತ್ತದೆ. ಮನಸ್ಸಿಗೆ ಬೇಸರ

ವಾಗದಂತೆ ಆಟದ ಸಾಮಾನುಗಳೊಡನೆ ಮಗುವು ಕಾಲ ಕಳೆಯಲು ಉಪಯೋಗವಾಗುವುದು.

ಹೆಣ್ಣು ಮಗುವಾದರೆ ತನ್ನ ಅನಿಸಿಕೆಗಳನ್ನು ಆಡುವ ಬೊಂಬೆಯೊಡನೆ ಮಾತನಾಡಿಕೊಂಡು ಸಮಯ ಸಾಗಿಸುವುದು.

ಕೆಲವು ಸಾಮಾನುಗಳನ್ನು ಉಪಯೋಗಿಸುವುದರಿಂದ ಅವುಗಳು ಹೇಗೆ ಕೆಲಸ ಮಾಡುತ್ತವೆ. ಹೇಗೆ ಆಡಿಸುವುದು, ಎಂಬುದನ್ನು ತಿಳಿದುಕೊಳ್ಳಲು ಯೋಚಿಸುವುದರಿಂದ ಬುದ್ಧಿ ಹೆಚ್ಚುತ್ತದೆ. ಆಟದ ಸಾಮಾನುಗಳನ್ನು ಇತರ ಮಕ್ಕಳೊಡನೆ ಬದಲಾಯಿಸಿಕೊಳ್ಳುವುದರಿಂದ ಬೇರೆ ಮಕ್ಕಳ ಸಂಪರ್ಕ, ಸ್ನೇಹ, ಸಹಕಾರ ಮತ್ತು ಸಹಾಯಗಳಿಂದ "ಒಂದುಗೂಡಿ ಬಾಳು"ವುದಕ್ಕೆ ಅನುಕೂಲವಾಗುವುದು. ಮಗು ರೋಗಿಯಾದಾಗ ಆಟದ ಸಾಮಾನುಗಳು ಮಕ್ಕಳ ಮನಸ್ಸನ್ನು ಪರಿವರ್ತಿಸಲು ಮನಸ್ಸಿನ ಭಾರ ಕಡಿಮೆ ಮಾಡಲು ಮತ್ತು ಸಮಯ ಕಳೆಯಲು ಸಹಾಯಕವಾಗುವುದು. ಚಿಕ್ಕಂದಿನಿಂದಲೂ ಆಟದ ನಂತರ ಉಪಯೋಗಿಸಿದ ಸಾಮಾನುಗಳನ್ನು ಜೋಡಿಸುವುದನ್ನು ಮತ್ತು ಒಂದು ಕಡೆ ಜೋಪಾನವಾಗಿ ಇಡುವುದನ್ನು ಹೇಳಿಕೊಡುವುದರಿಂದ ಮುಂದೆ ಜೀವನದಲ್ಲಿ ಮಗು ಶಿಸ್ತಿನಿಂದ ಬಾಳಲು ಕಲಿಸಿ ಪ್ರೋತ್ಸಾಹಿಸಿದಂತೆ ಆಗುವುದು. ಆಟದಲ್ಲಿ ಉಪಯೋಗಿಸುವ ಸಾಮಾನುಗಳೊಡನೆ ನಡೆದುಕೊಳ್ಳುವ ರೀತಿಯನ್ನು ತಾಯಿ ತಂದೆಯರು ಗಮನಿಸಿದರೆ ಮಗುವಿನ ಆಸೆ, ಅಭಿರುಚಿಗಳೇನು. ಯಾವುದರಲ್ಲಿ ಆಸಕ್ತಿ ಮತ್ತು ಶ್ರದ್ಧೆ ಇದೆ ಎಂಬುದನ್ನು ತಿಳಿಯಬಹುದು. ಉದಾ: ಹುಡುಗಿಯು ಮನೆ ಕೆಲಸದ ಬಗ್ಗೆ ತೋರುವ ಆಸಕ್ತಿಯು ಮುಂದೆ ಆಕೆಯು ಒಳ್ಳೆಯ ಗೃಹಿಣಿಯಾಗುವ ಲಕ್ಷಣಗಳು

ಕಾಣುವುವು. ಹುಡುಗಿ/ಹುಡುಗ ಆಟದ ಸಾಮಾನುಗಳಲ್ಲಿ ಮನೆ ಕಟ್ಟುವುದು ಅವುಗಳನ್ನು ಬಿಡಿಸಿ ಮತ್ತೆ ಜೋಡಿಸುವುದ ರಲ್ಲಿ ನಿರತರಾದರೆ ಮುಂದೆ ಅಭಿಯಂತರರು (ಇಂಜಿನಿಯರು) ಆಗುವ ಸೂಚನೆಗಳು. "ಬೆಳೆಯುವ ಪೈರು ಮೊಳಕೆಯಲ್ಲೇ" ಎಂಬಂತೆ ತೋರುವುವು. ಆಟವಾಡುವಾಗ ತೋರುವ ಶ್ರದ್ಧೆ, ಬುದ್ಧಿವಂತಿಕೆ, ಜ್ಞಾಪಕ ಶಕ್ತಿಗಳಿಂದ ಅವರಿಗೆ ಕೂಡುವ ಮತ್ತು ಕಳೆಯುವ ಲೆಕ್ಕಗಳನ್ನು ಹೇಳಿಕೊಟ್ಟು, ಗಣಿತದಲ್ಲಿ, ಪಾಠ ಕಲಿಸಿದರೆ ಮುಂದೆ ಗಣಿತ ಶಾಸ್ತ್ರದಲ್ಲಿ ಪ್ರವೀಣರಾಗಬಹುದು.

ತಾಯಿ ತಂದೆಯರು ಎಂತಹ ಆಟದ ಸಾಮಾನುಗಳನ್ನು ಕೊಳ್ಳಬೇಕು ಅದರಿಂದ ಪ್ರಯೋಜನವೇನು ಎಂಬುದನ್ನು ಅರಿಯುವುದು ಒಳ್ಳೆಯದು.

— ಆಟದ ಸಾಮಾನುಗಳನ್ನು ಮಗು ೫ ತಿಂಗಳ ನಂತರ ಬಾಯಲ್ಲಿ ಇಟ್ಟುಕೊಳ್ಳುವ ಅಭ್ಯಾಸವಿರುವುದರಿಂದ ಅವು ಕೊಳೆಯಾದಾಗ ತೊಳೆಯುವಂಥ, ಹಚ್ಚಿದ ಬಣ್ಣ ವಿಷ ಕಾರಿಯಾಗದಂಥ ಅಲ್ಲದೇ ಸುಲಭವಾಗಿ ಕಳಚಿಕೊಳ್ಳುವ ಮತ್ತು ನುಂಗುವಂಥ ಅತಿ ಸಣ್ಣದಾಗಿರಬಾರದು.

— ಆಟವಾಡುವಾಗ ಕೈ ಕಾಲು ಮೈಗಳನ್ನು ಕತ್ತರಿಸುವಂಥ ಹರಿತವಾದ ಸಾಮಾನುಗಳಾಗಿರಬಾರದು.

— ತಾತ್ಕಾಲಿಕವಾಗಿ ಆಟಕ್ಕೆ ಉಪಯೋಗಿಸುವುದರಿಂದ ಅತಿ ಬೆಲೆ ಬಾಳುವಂಥ ಸಾಮಾನುಗಳಾಗಿರಬಾರದು, ಬಡ ಮಕ್ಕಳಿಗೆ ಮನೆಯಲ್ಲಿ ಸಿಕ್ಕುವ ಹಳೆಯ ಪ್ಲಾಸ್ಟಿಕ್ ಡಬ್ಬ, ಲಟ್ಟಣಿಗೆ ಅಥವಾ ಮನೆಯಲ್ಲೇ ಮಾಡಿದ ಸರಳ ರೀತಿಯ ಸಾಮಾನುಗಳಾಗಬಹುದು.

— ಮಗುವಿನ ಮನೋಭಿಲಾಷೆಯನ್ನು ಅರಿತು ಆಟದ ಸಾಮಾನುಗಳನ್ನು ಕೊಡಿಸುವುದು ಮುಂದೆ ಅವರ "ಬಾಳಿನ ವೃತ್ತಿಗೆ ಸ್ಫೂರ್ತಿ" ನೀಡಿದಂತಾಗುವುದು.

— ಆಟದ ಸಾಮಾನು ಕೊಳ್ಳುವಾಗ ಮಗುವಿನ ವಯಸ್ಸಿಗೆ ಮತ್ತು ಬುದ್ಧಿಗೆ ತಕ್ಕಂತೆ ಯೋಚಿಸಿ ಪರೀಕ್ಷಿಸಿ, ಆಯ್ದು ಕೊಡಿಸಬೇಕು.

— ಎಳೆಯ ವಯಸ್ಸಿನಲ್ಲಿ ಎದ್ದು ಕಾಣುವ ಬಣ್ಣದ ಸಾಮಾನುಗಳಾಗಿರಬೇಕು.

— ೫-೬ ತಿಂಗಳ ಮಕ್ಕಳು ಸಂತೋಷದಿಂದ ಆಡುವಂತಹ ವಸ್ತುಗಳು, ಅದರಲ್ಲೂ ಉಪಯೋಗಿಸುವಾಗ ಶಬ್ಧ ಮಾಡುವಂತಹವು ಮತ್ತು ಒಂದು ಕೈಯಿಂದ ಮತ್ತೊಂದು ಕೈಗೆ ಬದಲಾಯಿಸಿಕೊಳ್ಳಲು ಸರಳವಾದ ಹಗುರವಾದ ಬೊಂಬೆಗಳು ಉತ್ತಮ.

— ಮರದ ಅಥವಾ ಪ್ಲಾಸ್ಟಿಕ್‌ನ ಬಣ್ಣ ಬಣ್ಣದ ಘನಾಕಾರದ (ಕ್ಯೂಬಿಕಲ್ಸ್) ಆಟದ ಸಾಮಾನುಗಳಾದರೆ ಒಂದು ಕಡೆ ಸ್ವತಂತ್ರವಾಗಿ, ಬುದ್ಧಿ ಉಪಯೋಗಿಸಿ ಒಂದರ ಮೇಲೆ ಒಂದು ಜೋಡಿಸಿ ನೋಡಿ, ಪಟ್ಟ ಶ್ರಮಕ್ಕೆ ಫಲವೆಂದು ಸಂತೋಷಪಡುವುದಲ್ಲದೆ ಬೇರೆಯವರಿಗೂ ತೋರಿಸಿ ಪ್ರಶಂಸೆ ಪಡೆಯುವುದು.

— ಮನೆಯ ಹೊರಗಡೆ ಓಡಾಡುವಂತಹ ಮಕ್ಕಳಿಗೆ ಕಾರು, ಟ್ರಕ್, ಬಸ್ಸುಗಳನ್ನು ಆಟವಾಡಲು ಕೊಡಿಸುವುದು ಉತ್ತಮ.

— ಮರದ ಕುದುರೆ, ಆನೆ, ಯಂತ್ರಗಳು, ಬಣ್ಣದ ಪೆನ್ಸಿಲ್ ಸೀಮೆಸುಣ್ಣಗಳು ಒಂದೂವರೆ ಎರಡು ವರ್ಷಗಳ ಮಕ್ಕಳ ಆಟಕ್ಕೆ ಸೂಕ್ತವಾದುವು.

— ಪ್ಲಾಸ್ಟಿಕ್‌ನ ನೀರಿನ ಡಬ್ಬಿ ಮತ್ತು ನೀರು ಇದ್ದಲ್ಲಿ ಮನೆಯ ಸುತ್ತ ಇರುವ ಹಿತ್ತಲು ಕೈತೋಟದಲ್ಲಿ ಲವಲವಿಕೆಯಿಂದ ಓಡಾಡಿಕೊಂಡು ಗಿಡಗಳಿಗೆ ನೀರು ಹಾಕಲು ಸಂತೋಷಪಡುವುದು.

— ಮನೆಯ ಹೊರಾಂಗಣದಲ್ಲಿ ಆಟ ಆಡಲು ದಾಂಡು (ಬ್ಯಾಟ್) ಚೆಂಡು (ಬಾಲ್) ಟ್ರೈಸಿಕಲ್ (ಮೂರು ಚಕ್ರದ ಗಾಡಿ) ಇದ್ದಲ್ಲಿ ಶುದ್ಧ ಗಾಳಿಯಲ್ಲಿ ಆಟವಾಡಲು ಅನುಕೂಲ ಮತ್ತು ಆನಂದವಾಗುವುದು.

— ಹಗುರ ಮತ್ತು ಆಕರ್ಷಣೀಯವಾಗಿರಬೇಕು. ಮಕ್ಕಳು ಇಷ್ಟ ಪಟ್ಟ ಮತ್ತು ಬುದ್ಧಿ ಶಕ್ತಿಯನ್ನು ಚುರುಕು ಮಾಡುವಂತಹ ಆಟದ ಸಾಮಾನುಗಳು ಮುರಿದಾಗ ಅಥವಾ ಕೆಟ್ಟು ಹೋದಾಗ ಮಕ್ಕಳ ಮನಸ್ಸಿನ ಮೇಲೆ ತುಂಬಾ ಪರಿಣಾಮ ಬೀರುವುವು. ಆದ್ದರಿಂದ ಬಾಳಿಕೆ ಬರುವಂತಹ ಸಾಮಾನುಗಳನ್ನು ಕೊಳ್ಳಬೇಕು.

— ಆಟಗಳು ಮಕ್ಕಳ ಶಾರೀರಕ ಮಾನಸಿಕ, ಸಾಮಾಜಿಕ, ಮತ್ತು ಬುದ್ಧಿ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುವುವು

— ಗ್ರಾಮಾಂತರ ಮತ್ತು ಗುಡ್ಡಗಾಡಿನ ಮಕ್ಕಳು ತಮ್ಮ ಸುತ್ತಮುತ್ತಲಿರುವ ಕಲ್ಲು, ಎಲೆ, ಹೂವು, ಪ್ರಾಣಿಗಳು ಅಂದರೆ ಕೋಳಿ, ಕುರಿಮರಿ, ನಾಯಿಮರಿಗಳೊಡನೆ

ಆಟವಾಡಿಕೊಂಡು ಬೆಳೆಯುವರು. ಆದರೆ ಅದೇ ವಯಸ್ಸಿನ ಪಟ್ಟಣದ ಶ್ರೀಮಂತ ಮಕ್ಕಳು "ಬ್ಯಾಟ ಸಹಾಯದಿಂದ" ಮಾತನಾಡುವ, ನಡೆಯುವ ಓಡು ತುಂಬಾ ಬೆಲೆ ಬಾಳುವ "ಬೊಂಬೆ", ಕಾರು ಮುಂತಾ ವಸ್ತುಗಳೊಡನೆ ಆಡಿಕೊಂಡು ಸಂತೋಷದಲ್ಲಿ ಕಾ ಕಳೆಯುವರು. ಅದೇ ಬಡವರ ಮಕ್ಕಳು, ಮನೆಯಲ್ಲಿ ಸಿಕ್ಕುವ ಖಾಲಿ ಟಿನ್ನಿನ ಡಬ್ಬ, ಸಿಗರೇಟಿನ ಡಬ್ಬಿ, ಹ ಕುರ್ಚಿ ಮತ್ತು ಮಂಚದ ಮರದ ಚೂರುಗಳನ್ನ ಉಪಯೋಗಿಸಿಕೊಂಡು ಆಡಿ ಆನಂದಿಸುವರು.

— ಮಕ್ಕಳು ಇತರರೊಡನೆ ಒಂದುಗೂಡಿ ಆಟವಾಡುವಾ "ಸೋಲು ಗೆಲುವು" ಗಳ ಪರಿಜ್ಞಾನ ಉಂಟಾಗಿ ಬಾ ನಲ್ಲಿ ಕಹಿ-ಸಿಹಿಗಳನ್ನು ಹಂಚಿಕೊಂಡು ಬಾಳುವುದಲ್ಲದೆ ಮುಂದೆಯೂ ದ್ವೇಷ ಅಸೂಯೆಗಳಿಂದ ದೂರವಿರಲ ಮಾರ್ಗದರ್ಶನವಾಗುವುದು.

— ಆಟವಾಡುವುದರಿಂದ ಉಂಟಾಗುವ ಆನಂದದ ಜೊತೆ ದೇಹದ ಮಾಂಸಖಂಡಗಳು ಚೆನ್ನಾಗಿ ಬೆಳೆದ ಹೊರಾಂಗಣದ ಕ್ರೀಡೆಗಳಾದ ಸೈಕಲ್ ಸವಾರಿ, ಈಜ ಸ್ಪರ್ಧೆಗಳಲ್ಲಿ ಭಾಗವಹಿಸಲು ದೇಹಾರೋಗ್ಯ ಕಾಪಾ ದಂತಾಗುವುದು.

— ಮಕ್ಕಳು ಆಟವಾಡುವುದು ಒಂದು ಬಗೆಯ ಚಿಕಿತ್ಸೆಯು ಹೌದು. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳಿಗೆ ಆಟ ಸಾಮಾನುಗಳೊಡನೆ ಆಟ ಆಡಿಸಿ, ಪದ ಪಾಠಗಳನ

ಹೇಳಿಕೊಟ್ಟು ಮನೋರೋಗದ ಚಿಕಿತ್ಸೆ (ಸೈಕ್ಯಾಟ್ರಿಯು ಪ್ಲೇ ಥೆರಫೀ)ಯನ್ನು ನೀಡಿದಂತಾಗುವುದು.

ಆಟವಾಡುವಾಗ ಬರಬಹುದಾದ ಕೋಪತಾಪಗಳನ್ನು ಆಟದ ಸಾಮಾನುಗಳ ಮೇಲೆ ಮಗು ತೋರಿಸುತ್ತಾ ಅವು ಗಳನ್ನು ಒಡೆಯುವುದು, ಮುರಿಯುವುದು ಮತ್ತು ಬಿಸಾಡು ವುದನ್ನು ಕಾಣುವುದರಿಂದ ಅದಕ್ಕೆ ಪರಿಹಾರವನ್ನು ಕಂಡು ಹಿಡಿಯಲು ಸಹಾಯಕವಾಗುವುದು.

ದಸರಾ ಮತ್ತು ದೀಪಾವಳಿ ಹಬ್ಬಗಳಲ್ಲಿ ಮಕ್ಕಳು ಪಟಾಕಿ ಸುಡುವುದರ ಜೊತೆಗೆ ಹೂವಿನ ಕುಂಡ ಕಡ್ಡಿಗಳನ್ನು ಹಚ್ಚಿದಾಗ ಹೊರ ಬರುವ ಬಣ್ಣ ಬಣ್ಣದ ಹೂವಿನ ಬೆಳಕಿನ ಕಿಡಿಗಳನ್ನು ಕಂಡು ಕುಣಿದು, ಸಂತೋಷಪಡುವಂತೆ "ಮನರಂಜನೆ" ಮಗುವಿನ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸುವುದು.

## ಮನರಂಜನೆ : ಪುಸ್ತಕಗಳು

೧. ಬಾಳೇ ಉತ್ತಮವಾದ ಪುಸ್ತಕ.

೨. ಜೀವನದಲ್ಲಿ ಪುಸ್ತಕಗಳಿಗಿಂತ ಉತ್ತಮ ಮಿತ್ರರಿಲ್ಲ.

೩. ಪುಸ್ತಕಗಳನ್ನು ಆಯ್ಕೆ ಮಾಡುವಾಗ ಮಕ್ಕಳ ಮನಸ್ಸು, ಬುದ್ಧಿವಂತಿಕೆ ಮತ್ತು ಅರ್ಹತೆಗಳ ಮೇಲೆ ಆರಿಸ ಬೇಕು.

೪. ಚಿಕ್ಕಮಕ್ಕಳು ಮೊದಲು ದೊಡ್ಡ ದೊಡ್ಡ ಬಣ್ಣ ಬಣ್ಣದ ಚಿತ್ರಗಳಿರುವ ಅದರಲ್ಲೂ ಪರಿಚಯವಿರುವ ಪ್ರಾಣಿ ಗಳಾದ ಆನೆ, ನಾಯಿ, ಕೋತಿ, ಕುದುರೆ ; ಪಕ್ಷಿಗಳಾದ ಗಿಣಿ, ನವಿಲು, ಕಾಗೆ ; ವಾಹನಗಳಾದ ಕಾರು, ಬಸ್ಸು, ಸೈಕಲ್ ಚಿತ್ರ ಗಳನ್ನು ಇಚ್ಛಿಸುವರು.

೫. ಮೂರು ವರ್ಷದ ಮಕ್ಕಳಿಗೆ ಅಕ್ಷರಮಾಲೆ ಅ-ಅರಸ, ಆ-ಆನೆ, ಇ-ಇಲಿ,-ಈ-ಈಶ್ವರ, ಉ-ಉಂಗು ಊ-ಊಟ ಚಿತ್ರಗಳಿರುವ ಪುಸ್ತಕಗಳನ್ನು ಕೊಡಿಸಿಕೊ ಬೇಕು.

೬. ೩ ರಿಂದ ೮ ವರ್ಷ ವಯಸ್ಸಿನ ಮಕ್ಕಳು ಕಥೆ ಕೇ ವುದರಲ್ಲಿ ಆಸಕ್ತಿ ತೋರುವರು. ಪ್ರಾರಂಭದಲ್ಲಿ ಸಣ್ಣ ಕಥೆ ಕೇ ವುದರಿಂದ ಬೆಳವಣಿಗೆಯಾದರೆ ನಂತರ ಪಂಚತಂ ರಾಮಾಯಣ, ಮಹಾಭಾರತ, ಬೈಬಲ್, ಕುರಾ ಮುಂತಾದ ಪೌರಾಣಿಕ ಮತ್ತು ಧರ್ಮದ ಕಥೆಗಳನ್ನು, ಸಂ ಮತ್ತು ಮಹಾತ್ಮರ ಕಥೆಗಳನ್ನು ಕೇಳಲು ಇಚ್ಛಿಸುತ್ತಾ ಬಿಡುವಾದಾಗ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರ ಮತ ಎಲ್ಲಾ ಮತಧರ್ಮಗಳ ಬಗ್ಗೆ ತಾಯಿಯು ಹೇಳಬೇಕ ಇದರಿಂದ ಮಕ್ಕಳು ಮಹಾತ್ಮರ ಒಳ್ಳೆಯ ನಡತೆಗಳನ್ನು ರಾ ಪ್ರೇಮ ಮತಧರ್ಮಗಳನ್ನು ಬೆಳೆಸಿಕೊಂಡು ಬಾಳಲು ಮತ ಜೀವನದಲ್ಲಿ ಬರುವ ಕಷ್ಟ ಸಮಸ್ಯೆಗಳಿಂದ ಬೇಗ ಪಾರ ಬಹುದು. ಚೈತನ್ಯ ಚಮತ್ಕಾರ ಮತ್ತು ಕಾರ್ಯದಕ್ಷತೆಗಳಿ ಯೋಚಿಸಲು ಕಲಿಯುವರು.

೭. ೮-೧೫ ವರ್ಷಗಳಲ್ಲಿ ನಗಿಸುವ, ರಹಸ್ಯದ ಪತ್ತೆದಾ ಕಾದಂಬರಿಗಳನ್ನು ಓದಿದರೆ ಪ್ರಾಪ್ತ ವಯಸ್ಕರು ಕಾಲ್ಪನಿ ಮತ್ತು ಇತರ ಅತ್ಯುತ್ತಮ ಪುಸ್ತಕಗಳನ್ನು ಓದಿ ಸಂತೋ ಪಡುತ್ತಾರೆ. ಎಲ್ಲಾ ವಯಸ್ಸಿನ ಮಕ್ಕಳು ಸಂಕ್ಷಿಪ್ತವಾ ಬರೆದಿರುವ ಎಲ್ಲಾ ಧರ್ಮಗಳ ಮತ್ತು ತತ್ವಶಾಸ್ತ್ರಗಳ ಪುಸ್ತ ಗಳನ್ನು ಓದಲು ಪ್ರೋತ್ಸಾಹಿಸಬೇಕು.

## ಹವ್ಯಾಸಗಳು

"ಜೀವನದಲ್ಲಿ ಮೊದಲಿನಲ್ಲೇ ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳುವವನು ಧನ್ಯನು"-ಎಮರ್‍ಸನ್.

ಹವ್ಯಾಸ ಎಂಬುದು ಒಂದು ಮನೋಹರ ವೃತ್ತಿ. ಇದನ್ನು ನಾವು ಹಣ ಸಂಪಾದನೆಗೆ ಮಾಡದೆ ಬಿಡುವಿನ ಸಮಯದಲ್ಲಿ ವಿನೋದಕ್ಕಾಗಿ ಕೈಗೊಳ್ಳುವಂತಹ ವೃತ್ತಿ.

## ಹವ್ಯಾಸಗಳಲ್ಲಿನ ವಿಧಗಳು

೧. ನಾಣ್ಯಗಳು, ಅಂಚೆಚೀಟಿಗಳು, ಎಲೆಗಳು, ಹೂವುಗಳು ಮತ್ತು ಕೈಬರಹಗಳನ್ನು ಸಂಗ್ರಹಿಸುವುದು.

೨. ತೋಟಗಾರಿಕೆ, ಚಿತ್ರಕಲೆ, ಛಾಯಾಚಿತ್ರ, ಸಂಗೀತ, ನೃತ್ಯ, ಮನೆಯ ಒಳಗೂ ಮತ್ತು ಹೊರಾಂಗಣದ ಆಟ ಪಾಠ, ಪಕ್ಷಿಗಳ ಹಾರಾಟ ನೋಡುವುದು, ಪ್ರಕೃತಿಯ ಸೊಬಗನ್ನು ನೋಡಿ ನಲಿವ ಸಂತೋಷಗಳು ಉತ್ತಮವಾದುವು.

೩. ತಾನೇ ನೀರೆರೆದು ಬೆಳೆಸಿದ ಗಿಡದಲ್ಲಿ ಕಂಡ ಹೂವು, ಅಂಗಡಿಯಲ್ಲಿ ಕೊಂಡುತಂದ ಹೂವಿಗಿಂತ ಹೆಚ್ಚಿನ ಆನಂದ ತರುವುದು.

೪. ತಂದೆ-ತಾಯಿಯರಿಗೆ ತಮ್ಮ ಮಕ್ಕಳು ಬರೆದ ಬಣ್ಣದ ಚಿತ್ರ ಬೇರೆ ಕಡೆಯಿಂದ ತಂದ ಚಿತ್ರಪಟಕ್ಕಿಂತ ಸಂತೋಷ ಉಂಟುಮಾಡುವುದು.

೫. ವಿವಿಧ ವಿಷಯಗಳ ಬಗ್ಗೆ ಪುಸ್ತಕಗಳನ್ನು ಓದಿ ತಿಳಿದುಕೊಳ್ಳುವುದೂ ಒಂದು ಹವ್ಯಾಸವೇ ಸರಿ.

೬. ಇದರಿಂದ ತಾಯಿ-ತಂದೆಯರು ತಮ್ಮ ಮಕ್ಕಳಿಗೆ ಒಳ್ಳೆಯ ಮತ್ತು ಮುಂದೆ ಲಾಭದಾಯಕವಾಗುವಂತಹ

ಹವ್ಯಾಸಗಳನ್ನು ಕಲಿಯಲು ಸ್ಫೂರ್ತಿ ನೀಡಿ ಪ್ರೋತ್ಸಾಹ
ಬೇಕು.

೭. ಹವ್ಯಾಸಗಳು ಮಕ್ಕಳಿಗಷ್ಟೇ ಅಲ್ಲದೆ ದೊಡ್ಡ
ಬಾಳಿನಲ್ಲೂ ಸಂತೋಷವನ್ನುಂಟು ಮಾಡುವ ಮತ್ತು ಬೇ
ದುಃಖಗಳನ್ನು ಪಾರು ಮಾಡುವ ಅಲ್ಲದೆ ನಿವೃತ್ತಿ ಜೀವನದಲ್ಲ
ಪ್ರವೃತ್ತರಾಗಲು ಸಹಾಯಕವಾಗುವುವು.

## ದೂರದರ್ಶನ

೧. "ದೂರದರ್ಶನ ನೋಡಿ, ಪುಸ್ತಕ ಬಿಡಿ. ದೂರದರ್ಶ
ಬಿಡಿ, ಪುಸ್ತಕ ಹಿಡಿ." ಯಾವುದನ್ನೂ ಬಿಡುವುದು ಬೇ
ಎರಡಕ್ಕೂ ಸಮಾನ ಗಮನ ನೀಡಿದರೆ ಬುದ್ಧಿವಂತರಾಗಬಹುದ

೨. ದೂರದರ್ಶನ ಅಂಗವಿಕಲರಾದ ಮತ್ತು ಮಂ
ಬುದ್ಧಿಯ ಮಕ್ಕಳಿಗೆ ಹೊರಗಿನ ಪ್ರಪಂಚದಲ್ಲಿ ಏನು ನಡೆಯ
ತ್ತಿದೆ ಎಂಬುದನ್ನು ಮನೆಯಲ್ಲೇ ಕುಳಿತು ನೋಡಿ ಹೆಚ್ಚಿ
ಬುದ್ಧಿ ಕಲಿಯುವ ಸೌಲಭ್ಯ ದೊರಕುತ್ತದೆ.

೩. ಹಲವಾರು ಉತ್ತಮ ಕಾರ್ಯಕ್ರಮಗಳು, ಒಳ್ಳೆ
ಮನರಂಜನೆಯ ಮಧ್ಯವರ್ತಿಗಳಾಗುವುವು. ಏಕಕಾಲದ
ನೋಡಿ, ಕೇಳಿ ಸಂತೋಷಪಡುವ ಭಾಗ್ಯದ ಲಾಭವಿದೆ.

೪. ಪ್ರತಿ ಭಾನುವಾರ ಮಧ್ಯಾಹ್ನ ಮಾತು ಬಾರದವರಿಗೆ
ಸನ್ನೆಯ ಮುಖಾಂತರ ವಾರ್ತೆಯ ಪ್ರಸಾರ ಮಾಡುವುದರಿ
ಪ್ರಪಂಚದಲ್ಲಿ ನಡೆಯುವುದನ್ನು ಮೂಗರಾದವರು ತಿಳಿ
ಕೊಂಡಂತೆ ಆಗುವುದು.

೫. ಮತ್ತೊಂದು ರೀತಿ ಪರಿಶೀಲಿಸಿದರೆ ಮಕ್ಕಳು ಆ
ಪಾಠ, ತಿಂಡಿ-ಊಟ ಮತ್ತು ನಿದ್ರೆಗಳನ್ನು ದೂರ ಮಾ

ಯಾವಾಗಲೂ ದೂರದರ್ಶನದ ಮುಂದೆ ಕುಳಿತು ದಿನಕಳೆಯು ವುದು ಸರಿಯಲ್ಲ. ಸಮಯದ ಮಹತ್ವವೇನು ಎಂದು ತಿಳಿಯು ವುದು ಸೂಕ್ತ. "ಮುತ್ತು ಕಳೆದರೆ ಸಂಪಾದಿಸಬಹುದು, ಹೊತ್ತು ಕಳೆದರೆ ಸಂಪಾದಿಸಲು ಸಾಧ್ಯವಿಲ್ಲ".

೬. ಜೀವನದಲ್ಲಿ ಮುಂದೆ ಮುಖ್ಯವಾಗಿ ಸಾಧಿಸಬೇಕಾದ ಕೆಲಸಗಳು ಬಹಳ ಇವೆ. ಆದ್ದರಿಂದ ಚಿಕ್ಕವಯಸ್ಸಿನಿಂದಲೇ ಶಿಸ್ತಿನ ಬಾಳನ್ನು ಬೆಳೆಸಿಕೊಂಡು ಸಮಯವನ್ನು ಕಾಪಾಡುವ ಒಳ್ಳೆಯ ಅಭ್ಯಾಸಗಳನ್ನು ರೂಢಿಸಿಕೊಂಡು ಬರಬೇಕು.

೭. ಮಕ್ಕಳೇಕೆ ದೊಡ್ಡವರೇ ದೂರದರ್ಶನದ ಅತಿ ಸಮೀಪ ದಲ್ಲಿ ಕುಳಿತು ನೋಡುವರು. ಇದರಿಂದ ದೃಷ್ಟಿದೋಷ, ತಲೆ ನೋವು ಕೆಲವರಿಗೆ ಮೂರ್ಛೆ (ಎಪಿಲೆಪ್ಸಿ) ಉಂಟಾಗಬಹುದು. ಕೊನೆಪಕ್ಷ ೧೦ ಅಡಿಗಳ ಅಂತರದಿಂದ ನೋಡುವುದು ಉತ್ತಮ.

೮. ಬೇಸರವಾದಾಗ ಸಂಗೀತ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನುಂಟು ಮಾಡುವುದಲ್ಲದೆ ಮಂದ ಬುದ್ಧಿ ಮಕ್ಕಳ ಜ್ಞಾನಾಭಿವೃದ್ಧಿಗೆ ಜ್ಯೋತಿಯಂತೆ ಬೆಳಗಿ ಅಂಧಕಾರವನ್ನು ಹೋಗಲಾಡಿಸಲು ಸಹಕಾರವೆಂದು ತಜ್ಞರು ಪರಿಗಣಿಸಿ ಸೂಚನೆ ಯಿತ್ತಿದ್ದಾರೆ.

## ಸ್ನೇಹ-ಸಹವಾಸ ದೋಷ

"ಜೀವನದ ಬೆಂಗಾಡಿನಲ್ಲಿ ತಂಪು ಬೀರುವ ತಂಗಾಳಿ ಸ್ನೇಹ ವೊಂದೇ" ಎಂದು ಎಪಿಕ್ಯೂರಸ್ ಅಭಿಪ್ರಾಯಪಟ್ಟರೆ, "ಸಹ ವಾಸದಂತೆ ಬುದ್ಧಿ ತಿಂಡಿಯಂತೆ ಲದ್ದಿ, ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ ದುರ್ಜನರ ಸಂಗ ಬಚ್ಚಲ ರೊಚ್ಚಿ ನಂತಿಹುದು" ಎನ್ನುತ್ತಾರೆ ಸರ್ವಜ್ಞ.

"ಪರಿಮಳ ಮಾರುವವರ ಹತ್ತಿರ ನೀವು ಓಡಾಡಿದರೆ ತಮ ಉಡುಪಿಗೆಲ್ಲಾ ಪರಿಮಳ ಬರುವುದು, ಇದ್ದಿಲು ಮಾರುವವ ಹತ್ತಿರ ಹೋದರೆ ನಿಮ್ಮ ಬಟ್ಟೆ ಕಪ್ಪಾಗದೆ ಇನ್ನೇನು ಫ ವಾದೀತು''—ಫರ್ದೂಸಿ.

ಆದ್ದರಿಂದ ತಾಯಿ-ತಂದೆಯರು ತಮ್ಮ ಮಕ್ಕಳ ಸ್ನೇಹಿತ ಮೇಲೆ ಕಣ್ಣಿಟ್ಟು ಎಚ್ಚರದಿಂದ ನೋಡುತ್ತಿರಬೇಕು. ಕೆಟ್ಟವ ಸಹವಾಸದಲ್ಲಿ ಬೆಳೆದರೆ ಅವರಂತೆ ನಡೆದುಕೊಳ್ಳಲು ಪ್ರಾರಂ ಸಿದರೆ ಬಾಳು ಹಾಳಾಗುವುದು.

ಉದಾಹರಣೆ :

೧. ತಾಯಿ-ತಂದೆಯರಿಂದ ಹಣ ಕದಿಯುವುದು

೨. ಶಾಲೆಯ ತರಗತಿಗಳಿಗೆ ತಪ್ಪಿಸಿಕೊಂಡು ವರ್ಷ ಕೊನೆಯಲ್ಲಿ ಹಾಜರಾತಿ ಕೊರತೆಯಿಂದ ಪರೀಕ್ಷೆಗೆ ಕುಳಿತ ಕೊಳ್ಳಲು ತೊಂದರೆ. ಆಗ ತಾಯಿ-ತಂದೆಯವರಿಗೆ ಬೇಸ ವಾಗುವುದು. ವಿಷಯ ಗೊತ್ತಾಗುವುದು ಆಗಲೇ.

೩. ಶ್ರದ್ಧೆಯಿಂದ ಓದುವ ಮಕ್ಕಳನ್ನು ಸ್ನೇಹಿತರು "ಓ ಓದಿ ಮರುಳಾದ ಕೂಚು ಭಟ್ಟ, ನೀನೊಬ್ಬ ಪುಸ್ತಕದ ಹುಳು ಎಂದು ಆಟಕ್ಕೋ ಸಿನಿಮಾಕ್ಕೋ ಕರೆದೊಯ್ಯುವರು. ಇಂತ ಕೆಲಸಕ್ಕೆ ಬಾರದ ಹರಟೆ ಹೊಡೆದು ಸಮಯ ಹಾ ಮಾಡುವವರ ಸ್ನೇಹ, ಸಹವಾಸ ಹಿತವಲ್ಲ.

ಸಹವಾಸ ದೋಷದಿಂದ ಮಕ್ಕಳಿಗೆ ಯಾವುದು ಕೆ ಕೆಲಸ, ನಡವಳಿಕೆಗಳಲ್ಲಿ ಯಾವುದು ಸರಿ, ಯಾವುದು ತಪ್ಪು ಎಂದು ಯೋಚಿಸಿ ತಿಳಿದು ಮಾಡುವಷ್ಟು ಬುದ್ಧಿ ಇರುವುದಿಲ್ಲ

ಉದಾಹರಣೆ: "ಸೇಬು ಹಣ್ಣಿನ ಕಥೆ"

ಹೆಚ್ಚಿನ ಬೆಲೆ ಬಾಳುವ ಸೇಬಿನ ಹಣ್ಣನ್ನು ವ್ಯಾಪಾರಿ ವಿಂಗಡಿಸುವಾಗ ಕೆಡುತ್ತಿರುವ ಒಂದು ಹಣ್ಣನ್ನು ಕಂಡು ಲಾಭ ಕಡಿಮೆಯಾಗುವುದಲ್ಲಾ ಎಂದು ಯೋಚಿಸಿ ಒಂದು ಬುಟ್ಟಿಗೆ ಒಳ್ಳೆಯ ಹಣ್ಣುಗಳೊಡನೆ ಆ ಕೆಟ್ಟ ಹಣ್ಣನ್ನು ಇಟ್ಟರೆ ಅದೂ ಒಳ್ಳೆಯದಾಗುವುದೆಂಬ ಆವನ ಊಹೆಗೆ ಬದಲಾಗಿ ಬುಟ್ಟಿಯಲ್ಲಿದ್ದ ಎಲ್ಲಾ ಹಣ್ಣುಗಳು ಕೆಟ್ಟದ್ದರಿಂದ ನಷ್ಟವಾಯಿತು. ಹಾಗೆ ಹತ್ತು ಒಳ್ಳೆಯ ಮಕ್ಕಳೊಡನೆ ಒಬ್ಬ ಕೆಟ್ಟವನಿದ್ದಾಗ ಅದರಲ್ಲೂ ಹಣವಂತನಾದರೆ ಎಲ್ಲರನ್ನೂ ಸುಲಭವಾಗಿ ಕೆಡಿಸಲು ಹಣ ಸಹಾಯ ಮಾಡುವುದು.

ತಾವರೆ ಎಲೆ ನೀರಿನಲ್ಲಿ ಇದ್ದಂತೆ ಸ್ನೇಹಿತರನ್ನು ಹೆಚ್ಚಾಗಿ ಅಂಟಿಸಿಕೊಳ್ಳಲೂಬಾರದು, ಪೂರ್ಣವಾಗಿ ಬಿಟ್ಟಿರಲೂಬಾರದು. ಗೆಳೆಯರು ಗೇಲಿ ಮಾಡುವರೆಂಬ ಭೀತಿಯಿಂದ ಸಂಗಡಿಗರಂತೆ ಬಟ್ಟೆ ಹಾಕುವುದು, ತಲೆ ಕೂದಲು ಉದ್ದವಾಗಿ ಬೆಳೆಸಿಕೊಳ್ಳುವುದು, ತಲೆಗೆ ಎಣ್ಣೆ ಹಾಕದಿರುವುದು, ಬೀಡಿ, ಸಿಗರೇಟ್ ಕುಡಿತದ ಚಟಕ್ಕೆ ಬಲಿಯಾಗಿ ಮಕ್ಕಳ ಬಾಳು ಹಾಳಾಗುವ ಸಂದರ್ಭಗಳು ಬಡ ಕುಟುಂಬಗಳ ಮಕ್ಕಳಲ್ಲೂ ಕಾಣಬಹುದು.

ಪ್ರಾಪ್ತ ವಯಸ್ಸಿಗೆ ಬಂದಾಗ ಹುಡುಗ–ಹುಡುಗಿಯರ ಸಲುಗೆ ಸಹವಾಸ ಅತಿಯಾಗದೆ ಮಿತವಾಗಿರಬೇಕು. ತಾಯಿ–ತಂದೆಯರು ಈ ವಯಸ್ಸಿನ ಮಕ್ಕಳನ್ನು ಗಮನಿಸುತ್ತಿದ್ದು ಆಗಾಗ್ಗೆ ಮನೆಗೆ ಆ ಸ್ನೇಹಿತರನ್ನು ಆಹ್ವಾನಿಸುವಂತೆ ಪ್ರೋತ್ಸಾಹಿಸಿ, ಅವರುಗಳು ಬಂದಾಗ ಪ್ರತಿಯೊಬ್ಬರ ಬಗ್ಗೆ ವಿವರ ತಿಳಿದು ಯಾರು ಒಳ್ಳೆಯವರು ಯಾರು ಕೆಟ್ಟವರು ಎಂದು ಗುರುತಿಸಿ, ಕೆಟ್ಟವರ ಸಹವಾಸವನ್ನು ಬಿಡಲು ಮತ್ತು ಎಚ್ಚರಿಕೆ

ಯಿಂದಿರಲು ಬುದ್ಧಿ ಹೇಳಿ, ಮಕ್ಕಳನ್ನು ತಿದ್ದಿ ಮುಂಜೆ
ಮಾರ್ಗದರ್ಶನ ನೀಡುವುದು ಉತ್ತಮ.

ಒಂದೇ ಬಣ್ಣದ ಗರಿಗಳುಳ್ಳ ಪಕ್ಷಿಗಳು ಒಂದುಗೂಡುವ
ಒಳ್ಳೆಯ ನಡತೆಯುಳ್ಳ ಸ್ನೇಹಿತರನ್ನು ಒಂದುಗೂಡಿಸುವು
ಮುಂದೆ ಎಲ್ಲರಿಗೂ ಒಳ್ಳೆಯದು.

"ನಿನಗಿಂತ ಒಳ್ಳೆಯವನಲ್ಲದವನೊಡನೆ ಸ್ನೇಹ ಬೇ
ಬೇಡ"–ಕನ್‌ಫ್ಯೂಷಿಯಸ್.

## ನೆರೆಹೊರೆಯುವರು-ಪರಿಸರ

"ದೂರದಲ್ಲಿರುವ ಆಪ್ತ ಬಂಧುಗಳಿಗಿಂತ
ನೆರೆಹೊರೆಯ ನೆಂಟರೇ ಲೇಸು"

ನೆರೆಹೊರೆಯುವರು ಮಗುವಿನ ಅಭಿವೃದ್ಧಿಯಲ್ಲಿ ಬಹಳ
ಭಾಗಿಗಳಾಗುವರು. ಪಕ್ಕದ ಮನೆಯುವರು ಒಳ್ಳೆಯವರಾಗಿದ್ದ
ಪ್ರೀತಿ ವಾತ್ಸಲ್ಯಗಳಿಂದ ಮಗುವಿನೊಡನೆ, ಸಲುಗೆಯಿಂ
ಮಾತನಾಡಿ ನಗುಮುಖ ತೋರಿ, ಕೈ ಸನ್ನೆ ಮಾಡಿ ಕರೆ
ಬಂದಾಗ ಎತ್ತಿಕೊಂಡು ಮುದ್ದಾಡುವರು. ಮುಂದುವರೆದು
ನೆರೆಹೊರೆಯುವರ ಪರಿಚಯದಿಂದ ಮಗು ಅವರನ್ನು ಕಂಡಾ
ಲೆಲ್ಲಾ ನಗುತ್ತಾ ಕೈ ಬೀಸಿ, ಕರೆದು ಆಕರ್ಷಿಸುವುದು. ಇದರಿಂ
ಇವರುಗಳ ಪ್ರೀತಿ ಹೆಚ್ಚಾಗಿ ಸಮಯ ಸಿಕ್ಕಿದಾಗಲೆಲ್ಲಾ ಪಕ್ಕ
ಮನೆಯಲ್ಲೇ ಮಗು ಬೆಳೆಯುವುದು; ತಾಯಿಗೂ ಕೈ ಕೆಲಸ
ಕಡೆ ಗಮನ ನೀಡಲು ಅವಕಾಶವಾಗುವುದು ಜಗಳವಾಡು
ಜನರಾದರೆ ಸಣ್ಣಪುಟ್ಟ ವಿಷಯಗಳಿಗೆಲ್ಲಾ ವೈಮನಸ್ಸ
ತೋರಿಸುತ್ತಾ ಮಗುವಿನ ಮತ್ತು ಮನೆಯವರ ಬಗ್ಗೆ
ಉದಾಸೀನ ತೋರಿ ಕೋಪದ ಮುಖ ಮಾಡಿ ಅಸಹಕಾ
ನೀಡುವರು. ಪ್ರತಿ ನಿತ್ಯ ತಪ್ಪು ಹುಡುಕುತ್ತಾ ಗೊಡ್ಡು ಹ

ಹೊಡೆಯುವುದು ಮಕ್ಕಳು ಓದುವ ವೇಳೆ ಬೇಕೆಂದೇ ಹೆಚ್ಚಿನ ಶಬ್ದ ಮಾಡುವಂತೆ ರೇಡಿಯೋ, ದೂರದರ್ಶನ ಮತ್ತು ಟೇಪ್ ರೆಕಾರ್ಡರ್ ಹಾಕಿ ಪ್ರಶಾಂತ ವಾತಾವರಣ ಹಾಳು ಮಾಡಿ ಮಕ್ಕಳ ಅಭಿವೃದ್ಧಿಗೆ ಅನಾನುಕೂಲ ಮಾಡುವರು.

ಟಿ.ವಿ. ಇಲ್ಲದ ಮನೆಯ ಮಕ್ಕಳು ಪಕ್ಕದ ಮನೆಯಲ್ಲಿ ಟಿ.ವಿ. ನೋಡಲು ಆಸೆಯಿಂದ ಹೋದಾಗ ಅವರು ಆಡುವ ಅಣಕದ ಮಾತುಗಳು ಮಕ್ಕಳ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವಾಗಿ ಹೊರಗೆ ಬಂದು ಮಕ್ಕಳು ಹಟ ಮಾಡಿ ತಾಯಿ ತಂದೆಯುವರಿಗೂ ಬೇಸರ ಮಾಡಿ ಹಣದ ತೊಂದರೆ ಇದ್ದರೂ ಸಾಲ ಮಾಡಿ ಟಿ. ವಿ. ತರಲು ಒತ್ತಾಯಿಸುವ ಪ್ರಸಂಗ ಬರಬಹುದು.

ಚಿಕ್ಕಮಕ್ಕಳು ಅಕ್ಕಪಕ್ಕದ ಮಕ್ಕಳೊಡನೆ ಸಣ್ಣಪುಟ್ಟ ಮಾತಿಗೆ ಜಗಳವಾಡಿದಾಗ ತಾಯಿ–ತಂದೆಯುವರು ಮಧ್ಯ ಪ್ರವೇಶ ಮಾಡಬಾರದು. ನೆರೆಹೊರೆಯವರೊಡನೆ ಹೇಳಲೂ ಬಾರದು. ಕಾರಣ, ಸ್ವಲ್ಪ ಹೊತ್ತಿನಲ್ಲೇ ಜಗಳ ಮರೆತು ಮಕ್ಕಳು ಒಂದುಗೂಡಿ ಆಟವಾಡುವರು. ತಿಳಿಸಲೇಬೇಕಾದ ಪರಿಸ್ಥಿತಿ ಇದ್ದಲ್ಲಿ ಪಕ್ಕದ ಮನೆಯುವರಿಗೆ ಹೇಳಿದಾಗ ಸ್ನೇಹಿತರಾಗಿದ್ದವರು ಅನಾವಶ್ಯಕವಾಗಿ ಶತ್ರುಗಳಾಗುವರು. ಆಟದ ಸಾಮಾನುಗಳಿಗೆ ಜಗಳವಾಡಿದರೆ ಒಂದೇ ಆಟವನ್ನು ಇಬ್ಬರೂ ಆಡುವ ಬದಲಾಗಿ ಬೇರೆಬೇರೆ ಆಟಗಳನ್ನು ಆಡಲು ಪ್ರೋತ್ಸಾಹಿಸಬೇಕು.

ಮೂರು ವರ್ಷದ ಮಕ್ಕಳು ಕೆಲವೊಮ್ಮೆ ತಮ್ಮ ಆಟದ ಸಾಮಾನುಗಳನ್ನು ಬೇರೆಯುವರಿಗೆ ಆಡಲು ಕೊಡುವುದಿಲ್ಲ ಮತ್ತು ತಾವು ಆಟ ಆಡದಿದ್ದರೂ ಸುಮ್ಮನೇ ತಮ್ಮಲ್ಲೇ ಇಟ್ಟು ಕೊಳ್ಳುವುದು ವಾಡಿಕೆ. ಇದರಿಂದ ಪಕ್ಕದ ಮನೆಯ ಮಕ್ಕಳ

ಮನಸ್ಸಿಗೆ ನೋವಾಗಿ ಅಳುತ್ತಾ ಬಂದು ತಾಯಿ-ತಂದೆಯರಿ
ದೂರು ಹೇಳುವರು.

ಯಾವ ಕಾರಣವೂ ಇಲ್ಲದೆ ಪಕ್ಕದ ಮನೆ ಮಗುವಿಗೆ ಹೊ
ದಾಗ ತಮ್ಮ ಮಗುವಿಗೆ ಬುದ್ಧಿ ಹೇಳಿ ಮಾಡಿದ ತಪ್ಪಿ
ಅವರಿಂದ ಕ್ಷಮೆ ಕೇಳಲು ಆದೇಶ ನೀಡಬೇಕು. ಇಲ್ಲವಾದ
ನೆರೆಯವರ ವಿರೋಧವನ್ನು ತಂದುಕೊಳ್ಳಬೇಕಾಗುವುದು
ಮತ್ತೊಬ್ಬ ಸ್ನೇಹಿತ ಹೊಡೆದಾಗ ಮಕ್ಕಳು ಶಾಂತತೆಯನ್ನು
ಕಾಪಾಡಿಕೊಂಡು ಅದನ್ನು ಮರೆಯಲು ಹೇಳಿಕೊಡಬೇಕು.

## ಶಿಸ್ತು ಪಾಲನೆ ಮತ್ತು ಶಿಕ್ಷೆ

"ಶಿಸ್ತು ಜೀವನದ ಜೀವಾಳ"

"ಯಾವುದೇ ರೀತಿಯ ಶಿಸ್ತು ಅರಾಜಕತೆಗಿಂತ ಒಳ್ಳೆಯದು"

—ಎ. ಡಿ. ರೀಚ

"ತಪ್ಪಿತಸ್ಥನನ್ನು ಉಳಿಸುವುದು ನಿರ್ದೋಷಿಯನ್ನು ಶಿಕ್ಷಿಸ
ವುದಕ್ಕಿಂತ ಲೇಸು" —ವಾಲ್ಟ

"ದಂಡನೆ ಮಾಡುವುದು ಯಾವಾಗಲೂ ಒಳ್ಳೆಯದಲ್ಲ. ಅ
ಸೌಹಾರ್ದವನ್ನು ಕೆಡಿಸುತ್ತದೆ ದ್ವೇಷ ಬೆಳೆಸುತ್ತದೆ"

—ಎಂ. ಆರ್. ಶ್ರೀ

ಮಕ್ಕಳಿಗೆ ಬೈದು ಶಿಕ್ಷೆ ಕೊಟ್ಟು ಬುದ್ಧಿ ಕಲಿಸುವ ಬದಲ
ಪ್ರೀತಿ ಮಾಡಿ, ಹೊಗಳುವುದರಿಂದ ಶಿಸ್ತು ಪಾಲನೆ ಮಾಡಲ
ತಾಯಿ-ತಂದೆಯರು ಉತ್ತೇಜನ ನೀಡಿದಂತಾಗುವುದು

ಮಕ್ಕಳು ಮನೆಯಲ್ಲಿ ಆಟವಾಡುವಾಗ ಸಂತೋಷ ಸಡಗ
ದಲ್ಲಿ ನೀರನ್ನು ನೆಲದ ಮೇಲೆ ಸುರಿಯಬಹುದು, ಹರಿದ ಕಾಗದ
ಚೂರುಗಳನ್ನು ಬಿಸಾಡಬಹುದು. ಮಣ್ಣಿನಲ್ಲಿ ಆಟವಾಡುವಾ

ಹುಡಿಯಾದ ಬಟ್ಟೆಗಳು ಕೊಳೆಯಾಗಬಹುದು. ಏನಾದರೂ ಮಕ್ಕಳು ಮಕ್ಕಳೇ ಅಲ್ಲವೇ ? ಅವರಿಗೆ ಮಾಡುತ್ತಿರುವ ಕೆಲಸ ಸರಿಯೇ ತಪ್ಪೇ ಎಂದು ಯೋಚಿಸುವ ಬುದ್ಧಿಶಕ್ತಿ ಇನ್ನೂ ಬೆಳೆದಿರುವುದಿಲ್ಲ ಆದ್ದರಿಂದ ತಾಯಿ-ತಂದೆಯರು ಕೋಪ ಮಾಡಿಕೊಳ್ಳದೆ ಬೇರೆ ಬಟ್ಟೆಗಳನ್ನು ಕೊಟ್ಟು ನೀರನ್ನು ಒರೆಸಿ ಕಾಗದದ ಚೂರುಗಳನ್ನು ಎತ್ತಿ ಬಿಸಾಡಿ, ಬುದ್ಧಿ ಹೇಳಿದಾಗ ಮಕ್ಕಳಿಗೆ ಶುಭ್ರತೆಯ ಮಹತ್ವದ ಅರಿವು ತಾನಾಗಿಯೇ ಮೂಡುವುದು.

ಪುಸ್ತಕಗಳನ್ನು ಓದಿದ ನಂತರ ಸರಿಯಾಗಿ ಜೋಡಿಸಿ ಒಂದು ಕಡೆ ಇಡುವುದು, ಹಾಕಿದ ಬಟ್ಟೆ ಮತ್ತು ಆಟವಾಡಿದ ಮೇಲೆ ಸಾಮಾನುಗಳನ್ನು ಎತ್ತಿ ಬೇರೆ ಕಡೆ ಇಡುವುದು ಒಳ್ಳೆಯ ಅಭ್ಯಾಸ. ಆದರೆ ಕೊಠಡಿಯಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದರೆ ತಾಯಿ-ತಂದೆಯರು ಬೇಸರ ಮಾಡಿಕೊಂಡು ಬೈಯ್ಯದೆ ಅವರೇ ಅವುಗಳನ್ನು ಎತ್ತಿ ಜೋಡಿಸಿ ಸ್ವಚ್ಛತೆಯ ಬಗ್ಗೆ ಬುದ್ಧಿ ಹೇಳುವುದು. ಇದೇ ಮುಂದೆ ಮಾರ್ಗದರ್ಶನ ನೀಡಿದಂತಾಗುವುದು ಮತ್ತು ಮಕ್ಕಳಿಗೆ ತಪ್ಪು ಗೊತ್ತಾಗುವುದು. ಮಕ್ಕಳಿಗೆ ಯಾವುದೇ ಕೆಲಸ ಹೇಳುವಾಗ ಆಜ್ಞೆ ಮಾಡದೆ ಪ್ರೀತಿಯಿಂದ ಒಳ್ಳೆಯ ಮಾತಿನಲ್ಲಿ ಹೇಳಿ ಕೆಲಸ ಮಾಡಿಸಬೇಕು. ಏಕೆಂದರೆ "ಮಾತೇ ಮುತ್ತು ಮಾತೇ ಮೃತ್ಯು" ಎಂಬ ಗಾದೆಯಂತೆ ಮಕ್ಕಳ ಮನಸ್ಸು ಮೃದುವಾದ್ದರಿಂದ ಮಾತಿನ ಬಿರುಸು ನೋವನ್ನು ಉಂಟು ಮಾಡಬಹುದು. ಉದಾ : ಹೊರಗಿನಿಂದ ಆಯಾಸವಾಗಿ ಬಂದ ತಂದೆಗೆ ನೀರು ಬೇಕಾದಾಗ "ನನಗೆ ಒಂದು ಲೋಟ ನೀರು ಕೊಡುತ್ತೀಯಪ್ಪ ಮಗು' ಎಂದರೆ ಆ ಮಾತು ಹೇಳುವುದಕ್ಕೂ, ಕೇಳುವುದಕ್ಕೂ ಹಿತಕರವಾಗಿದ್ದು ನೀರು ಕೊಡಲು ಮಕ್ಕಳಿಗೂ ಸಂತೋಷವಾಗುವುದು.

ಗೋಡೆಯ ಮೇಲೆ ಪೆನ್ಸಿಲ್ ಅಥವಾ ಇದ್ದಲಿನಿಂದ ಗೀಚಿ ಬೊಂಬೆ ಬರೆದಾಗ ನೋಡಿದ ತಾಯಿ-ತಂದೆಯರು ಕೋ ಮಾಡಿಕೊಂಡು ಗೋಡೆ ಗಲೀಜು ಮಾಡಿದ್ದಕ್ಕೆ ಬೈದ ಹೊಡೆದು ಶಿಕ್ಷೆ ಮಾಡಬಾರದು. ಅವರಿಗೆ ಬರೆಯಲು ಬೇ ಕಪ್ಪು ಹಲಗೆ, ಸೀಮೆಸುಣ್ಣ, ಒರೆಸಲು ಒಂದು ಹಳೇ ಬಟ್ ಕೊಟ್ಟು ತಪ್ಪನ್ನು ತಿದ್ದಬೇಕು. ಆಗ ಮಕ್ಕಳಿಗೆ ತಾ ಮಾಡಿದ ತಪ್ಪು ಅರಿವಾಗುವುದು. ಜೊತೆಗೆ ಬಾಯ ಮಾತಿನಲ್ಲೇ ಬೆದರಿಸುವುದು ಕೈಗೆ ಕೋಲು ತೆಗೆದುಕೊಳ ವುದಕ್ಕಿಂತ ಉತ್ತಮ.

## ಮಕ್ಕಳಿಗೆ ಶಿಸ್ತು ಕಲಿಸುವಾಗ ತಾಯಿ-ತಂದೆಯರ ಹೊಂದಾಣಿಕೆ ಮುಖ್ಯ

ಮನೆಯಲ್ಲಿ ಸೌದೆ ಇಲ್ಲದಿರುವಾಗ ಹತ್ತು ವರ್ಷದ ಮಗನಿ ರಸ್ತೆಯ ಉದ್ಯಾನವನದ ಮರ ಕತ್ತರಿಸಿ ತರಲು ಪ್ರೇರೇಪಿಸಲು ಬಾರದು, ಪ್ರೋತ್ಸಾಹ ನೀಡಲೂ ಬಾರದು. ಇದರಿಂದ ನಾವ ಮಕ್ಕಳಿಗೆ ಕೆಟ್ಟ ಬುದ್ಧಿ ಕಲಿಯಲು ಸಹಕರಿಸಿದಂತಾಗಿ ಮುಂ ಅದನ್ನೇ ರೂಢಿ ಮಾಡಿಕೊಳ್ಳುವರು. "ವೃಕ್ಷ ರಕ್ಷಣೆ ಪರಿಸ ಮತ್ತು ರಾಷ್ಟ್ರ ರಕ್ಷಣೆ" ಎಂಬುದನ್ನು ಅರಿವು ಮಾಡಬೇಕು ಮಕ್ಕಳು ತಿಳಿಯದೇ ತಪ್ಪು ಮಾಡಿದಾಗ ಶಿಕ್ಷೆ ಅದಕ್ಕೆ ಅನ ಗುಣವಾಗಿರಬೇಕು. ಅನಂತರ ಅದನ್ನು ಮರೆತು ಮಗುವಿ ಬೇರೆ ಕೆಲಸವನ್ನು ಕೊಡಬೇಕೇ ವಿನಹ ತಾಯಿ ಮತ್ತೆ ಅದೆ ತಪ್ಪನ್ನು ನೆನಪು ಮಾಡಿ ಸಂಜೆ ನಿಮ್ಮ ತಂದೆಗೆ ಹೇಳಿ ನಿನ ಶಿಕ್ಷೆ ಮಾಡಿಸುತ್ತೇನೆ ಎಂದು ಹೆದರಿಸಬಾರದು. ಆಗ ಅವ ಮುಂದೆ ಏನಾಗುವುದೋ ಎಂದು ಭಯಭೀತರಾಗಬಹುದು.

ಮಕ್ಕಳಿಗೆ ಶಿಕ್ಷೆ ನೀಡುವಾಗ ವಿವೇಚನೆಯುಳ್ಳದ್ದಾಗಿರಬೇಕು. ಏನೋ ತಪ್ಪಿಗೆ ಸಂಜೆ ಹುಡುಗರೊಡನೆ ಆಟಕ್ಕೆ ಹೋಗಬೇಡ ವೆಂದೋ ಹುಡುಕಿಕೊಂಡು ಬಂದ ಸ್ನೇಹಿತರಿಗೆ ಮನೆಯಲ್ಲಿ ಇಲ್ಲ ಎಂದೋ ಹೇಳಿ ಹೊರಗೆ ಬಿಡದಿರುವುದು ಕಾರ್ಯಸಾಧಕ ಶಿಕ್ಷೆ. ಅದಕ್ಕೆ ಬದಲಾಗಿ ಆ ದಿನ ಊಟ ಹಾಕದಿರುವುದು ಬುದ್ಧಿ ಇಲ್ಲದ ಶಿಕ್ಷೆ. ಏಕೆಂದರೆ, ಸಂಜೆ, ರಾತ್ರಿಯಾದಂತೆ ಮನಸ್ಸು ಬದಲಾಗಿ ತಾಯಿ-ತಂದೆಯರೇ ಮಗುವಿಗೆ ಊಟ ಮಾಡಲು ಕರೆಯುವ ಮತ್ತು ಒತ್ತಾಯಿಸುವ ಪರಿಸ್ಥಿತಿ ಬರಬಹುದು. ಇದಕ್ಕಾಗಿ ಮುಂಚೆಯೇ ಸ್ವಲ್ಪ ಯೋಚಿಸಿ ದುಡುಕಿ ಮಾತ ನಾಡುವುದನ್ನು ತಪ್ಪಿಸುವುದು ಒಳ್ಳೆಯದು. ಮಗುವಿನ ಮೇಲೂ ಪರಿಣಾಮವಿರುವುದಿಲ್ಲ. ಸತತವಾಗಿ ಬೀಡಿ, ಸಿಗರೇಟು ಸೇದುವ ಮತ್ತು ಸಾರಾಯಿ ಕುಡಿಯುವ ತಂದೆ ಮಕ್ಕಳಿಗೆ ಅವುಗಳ ದುಷ್ಪರಿಣಾಮಗಳ ಬಗ್ಗೆ ಮಾತನಾಡುವುದರಿಂದ ಏನು ಪ್ರಯೋಜನ.

ಯಾವ ಸಂದರ್ಭದಲ್ಲೂ ಮಕ್ಕಳ ಕೈಲಿ ಬೀಡಿ, ಸಿಗರೇಟು ಮತ್ತು ಸಾರಾಯಿಗಳನ್ನು ತರಿಸಿ ಕುಡಿಯಬಾರದು. ಇದರಿಂದ ಮಕ್ಕಳು ತಾವೂ ಈ ಚಾಳಿಯನ್ನು ಕಲಿಯಬಾರದೇಕೆ ಎಂದು ಕಂಡೂ ಕಾಣದಂತೆ ಪ್ರಾರಂಭಿಸುವರು. ಈ ಚಾಳಿ ಒಳ್ಳೆಯದೇ, ಕೆಟ್ಟದ್ದೇ ಎಂದು ಯೋಚಿಸಿ ತೀರ್ಮಾನ ತೆಗೆದುಕೊಳ್ಳುವಷ್ಟು ಬುದ್ಧಿಶಕ್ತಿ ಮಕ್ಕಳಿಗಿರುವುದಿಲ್ಲ. ತಂದೆಯೇ ತರಿಸಿಕೊಳ್ಳುತ್ತಾ ರಲ್ಲ. ನಾವೂ ಸ್ವಲ್ಪ ರುಚಿ ನೋಡೋಣವೆಂಬ ಭಾವನೆ ಬೆಳೆದು ಆರಂಭದಲ್ಲಿ ಅಲ್ಪವಾದದ್ದು ಅನಂತರ ಅತಿಯಾಗಿ ಮಕ್ಕಳು ಕೆಡಲು ತಂದೆಯೇ ಮೂಲ ವ್ಯಕ್ತಿಯಾಗುವನು.

## ಶಿಕ್ಷಣ ಮತ್ತು ಶಾಲೆ ಮಾಧ್ಯಮ

ಶಿಕ್ಷಣ ಸಂಸ್ಥೆಗಳು ಮಕ್ಕಳಿಗೆ ಜೀವನದ ಗುರಿ ಮತ್ತು
ಉದ್ದೇಶವೇನೆಂಬುದರ ಬಗ್ಗೆ ಬಹಳ ಒತ್ತಾಯವಾಗಿ ಬೋಧಿ
ಬೇಕು. ಶಿಕ್ಷಣದ ರೀತಿ, ಪಾಠಗಳ ಪಟ್ಟಿ ಅದಕ್ಕೆ ತಕ್ಕಂ
ಇರಬೇಕು.

ಶಿಕ್ಷಣವೆಂದರೆ ನೀತಿ, ನಡತೆ, ಜ್ಞಾನ ಸಂಪಾದನೆಯಿಂ
ಬುದ್ಧಿವಂತರಾಗಿ ಜೀವನ ನಡೆಸುವುದು ಹೇಗೆ ಎಂಬುದನ್ನು
ಕಲಿಸುವುದು, ಅಲ್ಲದೆ ನಮ್ಮ ಹಿಂದಿನ ಸಂಸ್ಕೃತಿಯನ್ನು ವೃದ್ಧಿ
ಗೊಳಿಸಿಕೊಂಡು ಬೇರೆಯವರಿಗೂ ತಿಳಿಯಪಡಿಸುತ್ತಾ ವಿದ್ಯಾರ್ಥಿ
ಗಳನ್ನು ಕುಟುಂಬದ, ಗ್ರಾಮಗಳ, ರಾಜ್ಯದ ಮತ್ತು ರಾಷ್ಟ್ರ
ಉತ್ತಮ ಪ್ರಜೆಗಳನ್ನಾಗಿ ಮಾರ್ಪಡಿಸುವುದು.

ಮಗುವು ಶಾಲೆಯಲ್ಲಿ ಗಣಿತಶಾಸ್ತ್ರ ಅಥವಾ ಮತ್ತಾವುದೋ
ಶಾಸ್ತ್ರವನ್ನು ಕಲಿತಿಲ್ಲವೆಂದು ಚಿಂತಿಸುವುದಕ್ಕಿಂತ ಜೀವನದಲ್ಲಿ
ಸತ್ಯ ಮತ್ತು ಪ್ರಾಮಾಣಿಕತೆಯನ್ನು ಕಲಿಸುವುದು ಮುಖ್ಯ
ಶಿಕ್ಷಣ ಸತ್ಯದ ಆಧಾರದ ಮೇಲೆ ನಡೆಯಬೇಕು.

ಮುಖ್ಯವಾಗಿ ನಾವು ತಿಳಿದುಕೊಳ್ಳಬೇಕಾದದ್ದು ಜೀವನದಲ್ಲಿ
ಬಡತನ, ಶ್ರೀಮಂತಿಕೆ, ಸುಖ, ದುಃಖ, ಹಣ, ಅಧಿಕಾರ
ಅಂತಸ್ತು, ಆರೋಗ್ಯ, ಅನಾರೋಗ್ಯಗಳು ತಾತ್ಕಾಲಿಕವಾದುವು
ನಡತೆ ಮಾತ್ರ ಶಾಶ್ವತವಾಗಿ ಬದುಕಿನಲ್ಲೂ ಮತ್ತು ಸಾವಿ
ನಂತರವೂ ಉಳಿಯುವುದೆಂದು.

ಆದ್ದರಿಂದ ಪ್ರತಿ ರಾಷ್ಟ್ರವೂ ತನ್ನ ಯುವಕರಿಗೆ ನೀಡಬೇಕಾ
ಆಧಾರಸ್ತಂಭವೇ ಶಿಕ್ಷಣ.

ವಿದ್ಯಾರ್ಥಿಗಳಿಗೆ ವಿಜ್ಞಾನ, ಗಣಿತ ಮತ್ತು ದ್ವಿತೀಯ ಭಾ
ಗಳನ್ನು ಹೇಳಿಕೊಡುವುದರ ಜೊತೆಗೆ ಇತರರನ್ನು ಅರ್ಥಮಾ

ಕೊಳ್ಳಲು ಒಳ್ಳೆಯ ನಡತೆ, ವಿವೇಚನಾ ಶಕ್ತಿ ಮತ್ತು ಮಾನ ವೀಯತೆಯುಳ್ಳ ಉತ್ತಮ ಪ್ರಜೆಯಾಗುವ ಕಲೆಯನ್ನು ಬೋಧಿಸಬೇಕು. ವಿದ್ಯಾರ್ಥಿ ಜೀವನ ಬಂಗಾರದಂತೆ. ವಿದ್ಯೆ ಬೆಲೆ ಬಾಳುವ ಸಂಪತ್ತು.

ಶಿಕ್ಷಣದಲ್ಲಿ ಮಾತೃಭಾಷೆಯನ್ನು ಅಳವಡಿಸುವುದು ಬಹಳ ಸುಲಭ ಮತ್ತು ಮುಖ್ಯವಾದದ್ದು. ಆದರೆ ಇಂಗ್ಲಿಷ್ ಭಾಷೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳೊಡನೆ ಸಂಪರ್ಕ ಹೊಂದಲು ಬೇಕಾದ ಭಾಷೆ. ಆದ್ದರಿಂದ ಅದನ್ನು ಕಡೆಗಾಣಿಸುವುದು ಸೂಕ್ತವಲ್ಲ. ತಾಯಿ—ತಂದೆಯರು ವಿದ್ಯಾವಂತರಾಗಿದ್ದು ಇಂಗ್ಲಿಷ್ ಭಾಷೆ ತಿಳಿದವರಾದರೆ ಆಗ ತಮ್ಮ ಮಕ್ಕಳನ್ನು ಇಂಗ್ಲಿಷ್ ಭಾಷೆಯಲ್ಲಿ ಶಿಕ್ಷಣ ನೀಡುವ ಶಾಲೆಗಳಿಗೆ ಸೇರಿಸಿ ಮನೆಯಲ್ಲೂ ಕಾಲಾವಕಾಶ ಮಾಡಿಕೊಂಡು ಚಿಕ್ಕ ವಯಸ್ಸಿನಿಂದಲೇ ತರಬೇತಿ ನೀಡಬೇಕು.

ಶಿಕ್ಷಣದಲ್ಲಿ ಅತಿ ಹೆಚ್ಚಿನ ಅಥವಾ ಅತಿ ಕಡಿಮೆಯ ಪ್ರೋತ್ಸಾಹ ನೀಡುವುದು ಸರಿಯಲ್ಲ. ಕೆಲವರು ಮೂರು ವರ್ಷಗಳ ವಯಸ್ಸಿನಲ್ಲೇ ಓದಲು ಬರೆಯಲು ಆಸಕ್ತಿ ತೋರಿದರೆ ಮತ್ತೆ ಕೆಲವರು ೫-೮ ವರ್ಷಗಳ ತನಕ ತಟಸ್ಥರಾಗಿರುತ್ತಾರೆ. ಕೆಲವು ಮಕ್ಕಳು ಪ್ರಾರಂಭದಿಂದಲೇ ಓದಲು ಮತ್ತು ಬರೆಯಲು ಇಚ್ಛೆಪಟ್ಟಾಗ ತಾಯಿ-ತಂದೆಯರು ಅವರಿಗೆ ಅವಕಾಶ ಕಲ್ಪಿಸಿ ಕೊಟ್ಟು ಪ್ರೋತ್ಸಾಹಿಸಬೇಕು. ಇಲ್ಲವಾದರೆ ಮಕ್ಕಳಿಗೆ ಮುಂದೆ ಅದರ ಅಭಿರುಚಿ ಇರುವುದಿಲ್ಲ.

ಪ್ರಪ್ರಥಮವಾಗಿ ಶಿಕ್ಷಣ ನೀಡಲು ಶಿಶುಗಳನ್ನು "ಶಿಶುವಿಹಾರ" ಗಳಲ್ಲಿ ಸೇರಿಸುವುದರಿಂದ ಅವುಗಳು ಪ್ರಾಥಮಿಕ ಶಾಲೆಗಳಿದ್ದಂತೆ. ಅಲ್ಲಿಗೆ ೩-೫ ವರ್ಷಗಳ ಮಕ್ಕಳು ಸೇರುವರು. ಇದರಿಂದ ಶಿಶು

ಗಳನ್ನು ನಿಧಾನವಾಗಿ ಹಿತಕರವಾದ ಮನೆಯವರಿಂದ ದೂ
ಮಾಡಿ ಇತರ ಮಕ್ಕಳ ಸಮೂಹದೊಡನೆ ಮತ್ತು
ಉಪಾಧ್ಯಾಯಿನಿಯರೊಡನೆ ಬೆರೆತು ಬಾಳುವ ಒಂದ
ಸದಾವಕಾಶ ನೀಡಿದಂತಾಗುವುದು. ಇಲ್ಲಿ ಆಟ ಪಾಠಗಳನ
ಕಲಿಯುವ ಮತ್ತು ಬೆಳವಣಿಗೆಯಲ್ಲಿ ಒಳ್ಳೆಯ ಅಭ್ಯಾ
ಗಳನ್ನು ಅನುಸರಿಸುವ ಸದಾವಕಾಶ ದೊರೆಯುವುದು.

ಪ್ರೀತಿ, ವಾತ್ಸಲ್ಯ ಮತ್ತು ಕರುಣೆಯಿಂದ ಉಪಾಧ್ಯಾಯಿ
ಯರು "ತಾಯಂದಿರ ಸ್ಥಾನದಲ್ಲಿ" ಇದ್ದು ಮಕ್ಕಳ ಪೋಷ
ಮಾಡಿ, ತರಬೇತಿ ನೀಡಿ ಅಭಿವೃದ್ಧಿಗೆ ಮಾರ್ಗದರ್ಶಕರಾಗಿರುವರು
ಇದರಿಂದ ತಾಯಂದಿರು ಮನೆಕೆಲಸಗಳನ್ನು ಮುಗಿಸಿ ವಿಶ್ರಾಂ
ಪಡೆಯಲು ಮತ್ತು ತಮ್ಮ ಹವ್ಯಾಸಗಳಲ್ಲಿ ತೊಡಗಲು ಅವಕಾ
ದೊರೆತು ಅನುಕೂಲವಾಗುವುದು. ಶಿಶುವಿಹಾರದಲ್ಲಿ ಪ್ರಾರಂ
ದಿಂದಲೇ ಪಾಠ ಹೇಳುವುದಕ್ಕಿಂತ ಹೆಚ್ಚಾಗಿ ಆಟ ಆಡಿಸುವ, ಕ
ಹೇಳುವ, ಚಿತ್ರ ಬರೆಸುವ, ಸಂಗೀತ ಹೇಳಿ ಕುಣಿಸುವುದರಲ್ಲ
ಕಾಲ ಕಳೆಯುವುದರಿಂದ ಮಕ್ಕಳಿಗೆ ಶ್ರಮಕ್ಕಿಂತ ಆನಂದ
ಹೆಚ್ಚಾಗುವುದು, ಅನಂತರ ಮಗು ಪಾಠಗಳನ್ನು ಆಟ ಮತ್ತ
ಕ್ರೀಡೆಗಳ ಮುಖಾಂತರ ಕಲಿಯುವುದು.

ಮಗು ತರಗತಿಯ ಇತರ ಮಕ್ಕಳೊಡನೆ ಹೇಗೆ ಹೊಂ
ಕೊಂಡು ಸ್ನೇಹ ಬೆಳೆಸಬೇಕೆಂಬುದನ್ನು ತಿಳಿದುಕೊಳ್ಳುವುದು
ಮಗುವು ಇತರ ಮಕ್ಕಳ ಗುಂಪಿನಲ್ಲಿ ಕುಳಿತು ಆಟ ಪಾಠಗಳನ
ಆಡುವುದಲ್ಲದೆ ಶಿಸ್ತನ್ನು ಕಲಿಯುವ ಅವಕಾಶ ದೊರೆಯುವುದ
ಅಲ್ಲದೆ ಗುಂಪಿನ ಮಕ್ಕಳ ವರ್ತನೆಗೆ ತಕ್ಕಂತೆ ಉಪಾಧ್ಯಾಯಿ
ಯರಿಂದ ಪಡೆದ ಶಿಕ್ಷೆ ಮತ್ತು ಪ್ರಶಂಸೆಗಳನ್ನು ನೋಡಿ ತನ್ನನ
ತಾನೇ ತಿದ್ದಿಕೊಳ್ಳುವಂತಾಗುವುದು. ನಿಶ್ಶಬ್ಧವಾದ ಪ್ರಶಾಂ

ವಾತಾವರಣ ಮಕ್ಕಳಿಗೆ ಅತ್ಯಾವಶ್ಯಕ. ಮಕ್ಕಳ ಗಮನ ಹೆಚ್ಚಿನ ಶಬ್ದ ಮಾಡುವ ಟಿ. ವಿ ರೇಡಿಯೋ ಕಾರ್ಯಕ್ರಮ ಗಳಿಂದ ಅತಿ ಸುಲಭವಾಗಿ ಬದಲಾಗುವುದು.

ಕೆಲವು ಮಕ್ಕಳು ಶಾಲಾ ಕಾಲೇಜುಗಳ ಗ್ರಂಥಾಲಯಗಳಲ್ಲಿ ಓದಲು ಇಷ್ಟ ಪಡುತ್ತಾರೆ. ಇದರಿಂದ ಒಂದೇ ವಿಷಯದ ಮೇಲೆ ಕೇಂದ್ರೀಕೃತವಾದ ಮನಸ್ಸಿನಿಂದ ಹೆಚ್ಚಿನ ಗಮನ ನೀಡಿ ಅಭ್ಯಾಸ ಮಾಡಿದಂತಾಗುವುದು. ಅಲ್ಲಿಯ ಒಳ್ಳೆಯ ವಾತಾವರಣ ದಲ್ಲಿ ಇತರ ಮಕ್ಕಳೂ ಓದುತ್ತಿರುವುದರಿಂದ ಆಸಕ್ತಿ ಹೆಚ್ಚಾಗು ವುದು. ಯಾವ ವಿಭಾಗದಲ್ಲಿ ವಿದ್ಯಾರ್ಥಿಗಳು ಆಸಕ್ತಿ ತೋರಿಸು ವರೋ ಆ ವಿಭಾಗವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವರು. ಜೊತೆಗೆ ಮಕ್ಕಳು ಯೋಚನೆ, ಒತ್ತಡ ಮತ್ತು ಕಾತರಗಳಿಂದ ಮುಕ್ತರಾಗುವರು. ಕೆಲವು ಬಾರಿ ''ಪರೀಕ್ಷೆ'' ಎಂಬ ಹೆಚ್ಚಿನ ಒತ್ತಡದ ಭೀತಿಯಿಂದ ಓದಿದ ವಿಷಯ ಗ್ರಹಿಸುವುದರಲ್ಲಿ ಅಡಚಣೆ ಉಂಟಾಗುವುದು.

ತಾಯಿ-ತಂದೆಯರು ದಿನದ ಇಂತಹ ಸಮಯದಲ್ಲೇ ವ್ಯಾಸಂಗ ಮಾಡಬೇಕೆಂದು ಮಕ್ಕಳನ್ನು ಒತ್ತಾಯಿಸಬಾರದು. ಸಾಮಾನ್ಯ ವಾಗಿ ಮಕ್ಕಳು ಸಾಯಂಕಾಲ ಶಾಲೆಯಿಂದ ಬಂದ ನಂತರವೂ, ರಾತ್ರಿ ಮಲಗುವ ವೇಳೆ ಅಥವಾ ಬೆಳಗಿನ ಜಾವ ವ್ಯಾಸಂಗ ಮಾಡಲು ಇಚ್ಛಿಸುವರು. ಕೆಲವರು ಅರ್ಧಗಂಟೆ, ಒಂದು ಗಂಟೆ ಓದುತ್ತಿದ್ದು ಗಮನ ಕಳೆದುಕೊಂಡಾಗ, ಸ್ವಲ್ಪ ಮನೋರಂಜನೆ ಗಾಗಿ ಇಷ್ಟಪಟ್ಟು ಟಿ.ವಿ. ರೇಡಿಯೋ ಅಥವಾ ಟೇಪ್ ರಿಕಾರ್ಡರ್ ಹಾಕಿಕೊಳ್ಳಬಹುದು. ಆಗ ತಾಯಿ-ತಂದೆಯರು ಬೇಸರ ಮಾಡಿ ಕೊಳ್ಳದೆ ಮಕ್ಕಳ ಪಾಲಿಗೆ ಓದುವ ಸಮಯ ಮತ್ತು ರೀತಿ ಯನ್ನು ಬಿಡುವುದು ಉತ್ತಮ.

ಯಾವ ಸಂದರ್ಭದಲ್ಲೂ ಮಕ್ಕಳ ಮುಂದೆ ಅವರ ಶಾಲೆಯ ಬಗ್ಗೆ ಉಪಾಧ್ಯಾಯರ ಬಗ್ಗೆ ಮತ್ತು ಪಾಠಗಳು ನಡೆಯು ವಿಚಾರಗಳಲ್ಲಿ ಟೀಕಿಸಬಾರದು. ಇದರಿಂದ ಮಕ್ಕಳ ಮನಸ್ಸಿ ಮೇಲೆ ಪರಿಣಾಮ ಉಂಟಾಗಿ ಆ ಶಾಲೆ ಪಾಠ ಮತ್ತ ಉಪಾಧ್ಯಾಯರ ಮೇಲಿನ ಅಭಿರುಚಿಯನ್ನು ಕ್ರಮೇಣ ಕಳೆದ ಕೊಳ್ಳುವರು. ತಾಯಿ-ತಂದೆಯರು ಮತ್ತು ವಿದ್ಯಾರ್ಥಿಗಳ ಯಾವಾಗಲೂ ಉಪಾಧ್ಯಾಯರಿಗೆ ನಮಸ್ಕರಿಸಿ, ಮರ್ಯಾ ಮತ್ತು ಗೌರವ ನೀಡುವುದರಿಂದ ಗುರು-ಶಿಷ್ಯರ ಬಾಂಧವ ಭದ್ರವಾಗಿ ಹೆಚ್ಚಿನ ವಿದ್ಯೆ ಲಭಿಸುವುದು.

ತಾಯಿ-ತಂದೆಯರು ಸಾಧ್ಯವಾದರೆ ಉಪಾಧ್ಯಾಯರುಗಳನ ಆಗಾಗ್ಗೆ ಭೇಟಿ ಮಾಡಿ ತಮ್ಮ ಮಕ್ಕಳ ವ್ಯಾಸಂಗದ ಅಭಿವೃದ್ ಬಗ್ಗೆ ತಿಳಿದು ತಮ್ಮ ಕುಂದು ಕೊರತೆಗಳನ್ನು ಮಕ್ಕಳ ಅಭಿವೃದ್ ಯಲ್ಲಿರುವ ಆಸೆ ಆಕಾಂಕ್ಷೆಗಳನ್ನು ಹೇಳಿಕೊಳ್ಳುವುದು ಉತ್ತಮವ ಇದರಿಂದ ಮಕ್ಕಳು ಯಾವ ಪಾಠಗಳಲ್ಲಿ ಹಿಂದಾಗಿದ್ದಾರೆ ಅಂತಹ ಪಾಠಗಳಲ್ಲಿ ವಿಶೇಷವಾದ ಮನೆ ಪಾಠ ಹೇಳಿಸಿ, ಅನುಕೂ ಮಾಡಿ ಕೊಡಬೇಕೇ ಹೊರತು ಪರೀಕ್ಷೆಯಲ್ಲಿ ತೇರ್ಗಡೆಯಾಗ ಕಡಿಮೆ ಅಂಕಗಳನ್ನು ಪಡೆದ ಮಕ್ಕಳಿಗೆ ಉಪಾಧ್ಯಾಯರ ಮೇ ತಮ್ಮ ಪ್ರಭಾವವನ್ನು ಬೀರಿ ಉತ್ತೀರ್ಣರಾಗುವಂತೆ ಮಾ ಮಕ್ಕಳನ್ನು ತಪ್ಪುದಾರಿಗೆ ತರಬಾರದು. ಇದರಿಂದ ಮಕ್ಕಳ ಮುಂದೆಯೂ ಓದುವ ಶ್ರದ್ಧೆಯಲ್ಲಿ ಉದಾಸೀನ ತೋರಿ ತಾಯಿ ತಂದೆಯ ಪ್ರಭಾವವನ್ನು ದುರುಪಯೋಗಪಡಿಸಿಕೊಳ್ಳುವರು ಅಲ್ಲದೆ ಸಮಾಜದಲ್ಲಿ ಒಬ್ಬ ಒಳ್ಳೆಯ ಸುಸಂಸ್ಕೃತ ವ್ಯಕ್ತಿಯಾ ಬಾಳುವ ಭಾಗ್ಯದಿಂದ ವಂಚಿತನಾಗುವರು.

ಮಕ್ಕಳ ಶ್ರಮ, ಶ್ರದ್ಧೆಗಳಿಗನುಸಾರವಾಗಿ ಹೊಗಳಬೇಕ

ವಿನಹ ಕುಟುಂಬದ ಇತರ ಸದಸ್ಯರಾದ ಸಹೋದರಿ, ಸಹೋದರರಿಗೆ ಅಥವಾ ಸ್ನೇಹಿತರಿಗೆ ಹೋಲಿಸಿ ಜನರ ಮುಂದೆ ಜರಿಯಬಾರದು. ಇದೂ ಕೂಡ ಮನಸ್ಸಿನ ಮೇಲೆ ದುಷ್ಪರಿಣಾಮ ಬೀರುವುದು.

ಬೆಳವಣಿಗೆಯಲ್ಲಿ ಸರಿಯಾಗಿಲ್ಲದ ಮಕ್ಕಳನ್ನು ತಜ್ಞವೈದ್ಯರುಗಳಿಗೆ ತೋರಿಸಿ ದೃಷ್ಟಿದೋಷ ಮತ್ತು ಕಿವುಡುಗಳ ನಿವಾರಣೆಗಾಗಿ ಕನ್ನಡಕ ಮತ್ತು ಕಿವಿ ಕೇಳಲು ಸಾಧನಗಳನ್ನು ಸಕಾಲದಲ್ಲಿ ಕೊಡಿಸಿ ದೋಷಗಳನ್ನು ಸರಿಪಡಿಸುವುದು ಒಳ್ಳೆಯದು. ಅಲ್ಲದೆ ಹೃದಯ ಮತ್ತು ಇತರ ಅಂಗಗಳ ತಜ್ಞ ವೈದ್ಯರುಗಳಿಂದ ಪರೀಕ್ಷೆ ಮಾಡಿಸಿ ಚಿಕಿತ್ಸೆ ಮತ್ತು ಸಲಹೆಗಳನ್ನು ಪಡೆಯುವುದು ಉತ್ತಮ. ಅನಾರೋಗ್ಯ ಮತ್ತು ಅಪೌಷ್ಟಿಕತೆಯ ಮಕ್ಕಳು ವ್ಯಾಸಂಗದಲ್ಲಿ ಸರಿಯಾಗಿ ಗಮನ ನೀಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಮಕ್ಕಳ ಆರೋಗ್ಯ ಮತ್ತು ಪೌಷ್ಟಿಕತೆಯ ಬಗ್ಗೆ ಹೆಚ್ಚಾಗಿ ತಿಳಿದುಕೊಂಡು ಅವರನ್ನು ರೋಗಗಳಿಂದ ಪಾರು ಮಾಡಬೇಕಾದ ಪೌಷ್ಟಿಕಾಂಶಗಳನ್ನು ಒಳಗೊಂಡ ‘‘ಸಮತೋಲನ ಆಹಾರ, ವಿಶ್ರಾಂತಿ ಮತ್ತು ಮನರಂಜನೆಗಳನ್ನು ನೀಡಬೇಕು. ಇದರಿಂದ ಆರೋಗ್ಯವೇ ಭಾಗ್ಯ” ಮತ್ತು ‘‘ದೇಹಾರೋಗ್ಯವುಳ್ಳವರಲ್ಲಿ ಮಾತ್ರ ಆರೋಗ್ಯಕರ ಮನಸ್ಸು ನೆಲೆಸುವುದು’’ ಎಂಬುವುದು ಗೊತ್ತಾಗುವುದು. ಶಾಲೆಗೆ ಹೋಗಲು ಕೆಲವು ಮಕ್ಕಳು ನಿರಾಕರಿಸುವರು. ಇದಕ್ಕೆ ಕಾರಣ ಭಯ. ಏಕೆಂದರೆ, ತಾಯಿ-ತಂದೆಗಳೊಡನೆ ಮನೆಯ ಹಿತಕರ ವಾತಾವರಣದಲ್ಲಿ ಮುದ್ದಾಗಿ ಬೆಳೆದವರನ್ನು ತಕ್ಷಣವೇ ಬೇರ್ಪಡಿಸಿದ ಹೊಸ ಸ್ಥಳ ಮತ್ತು ಸ್ನೇಹ ಸಹವಾಸಗಳಿಂದ ಮಗುವಿಗೆ ಬೇಸರ, ಭೀತಿ ಉಂಟಾಗುವುದು. ಅನಂತರ ನಿಧಾನ

ವಾಗಿ ಕೆಲವಾರು ದಿನಗಳಲ್ಲಿ ಶಾಲೆಗೂ ಹೊಂದಿಕೊಂಡು ಇ
ಮಕ್ಕಳೊಡನೆ ಕೂಡಿ ಆಡಿಕೊಂಡು ಸಂತೋಷವಾಗಿರುವರು

ಕೆಲವು ಮಕ್ಕಳು ತಾಯಿ–ತಂದೆಯರ ಪ್ರೀತಿ ವಿಶ
ಸಂಪಾದಿಸಲು ಮತ್ತು ಶಾಲೆಗೆ ಹೋಗುವುದನ್ನು ತಪ್ಪಿ
ಕೊಳ್ಳಲು ತಲೆನೋವು, ಹೊಟ್ಟೆನೋವುಗಳೆಂದು ನೆಪ ಹೇಳುವ
ಓದಲು ಅಭಿರುಚಿ ಇಲ್ಲದಿರುವ ದೊಡ್ಡ ಮಕ್ಕಳು ಗುರು
ಮತ್ತು ಕೆಟ್ಟ ಹುಡುಗರ ಸಹವಾಸದ ಭಯ ವ್ಯಕ್ತಪಡಿಸಿ ದೂ
ಹೇಳುವರು. ಯಾವ ಕಾರಣದಿಂದಲೂ, ಮಕ್ಕಳು ತರಗತಿಗ
ತಪ್ಪಿಸಿಕೊಳ್ಳಬಾರದೆಂದು ಒಳ್ಳೆಯ ಮಾತುಗಳಲ್ಲಿ ಹೇಳಿ ಮಕ್
ಮನವೊಲಿಸಿಕೊಂಡು ಸಾಧ್ಯವಾದರೆ ಕೆಲವು ದಿನ ಜೊತೆಯ
ಶಾಲೆಗೆ ಹೋಗಿ ಹೊರಗಡೆ ಕುಳಿತಿದ್ದು ತರಗತಿಗಳು ಮು
ಅನಂತರ ಮನೆಗೆ ಕರೆತರುವುದು ಉತ್ತಮ. ಇದರಿಂದ ಮಗು
ನಿಧಾನವಾಗಿ ಧೈರ್ಯ ಬಂದು ಮನಸ್ಸು ಬದಲಾಗುವುದ
ಕೆಲವೊಮ್ಮೆ ಮನೋರೋಗ ತಜ್ಞರಿಂದ ಪರೀಕ್ಷೆ ಮಾ
ಸಲಹೆ ಪಡೆಯುವುದು ಸೂಕ್ತ. ಮಕ್ಕಳ ತಪ್ಪಿಗಾಗಿ ಹೆದ
ಶಿಕ್ಷೆ ಕೊಡುವುದನ್ನು ಬಿಡಬೇಕು. ಇಲ್ಲವಾದರೆ ಭಯದಿ
ಬಲಹೀನರಾಗುವುದು ಉಂಟು. ಕ್ರಮೇಣ ಮಗು ಹಾಜರ
ಹೆಚ್ಚಿದಂತೆಲ್ಲಾ ತಾಯಿ–ತಂದೆಯರು ಸಂತೋಷ ವ್ಯಕ್ತಪ
ಮಗುವಿನ ಅಭಿವೃದ್ಧಿಗೆ ಇನ್ನೂ ಹೆಚ್ಚಿನ ಉತ್ತೇಜನ ನಿ
ಸಹಕರಿಸಬೇಕು.

## ೪. ಪೋಲಿಯೋ ರೋಗ

“ಆರೋಗ್ಯವೇ ಭಾಗ್ಯ” ಎಂಬುದು ಒಂದು ನಾಣ್ಣುಡಿ

ಕುಟುಂಬದಲ್ಲಿ ಎಲ್ಲರೂ ಆರೋಗ್ಯವಾಗಿರಬೇಕು. ಜೀವನದಲ್ಲಿ ಸುಖ ಶಾಂತಿಗಳಿರಬೇಕಾದರೆ ವ್ಯಕ್ತಿ ಬಡವ ಅಥವಾ ಬಲ್ಲಿದನಾಗಲೀ ಆರೋಗ್ಯವಂತನಾಗಿರಬೇಕಾದದ್ದು ಮುಖ್ಯ. ಪ್ರತಿಯೊಬ್ಬರ ಜೀವನದ ಮಂತ್ರವೇ ಆರೋಗ್ಯ. ಇಂದಿನ ಮಕ್ಕಳೇ ಮುಂದಿನ ಪ್ರಜೆಗಳೂ. ರಾಜ್ಯ ರಾಷ್ಟ್ರಗಳ ಸಂಪತ್ತೂ ಅಲ್ಲದೆ ಭದ್ರವಾದ ಸ್ತಂಭಗಳೂ ಹೌದು. ಆದ್ದರಿಂದ ರಾಷ್ಟ್ರದ ನಿಜವಾದ ಸಂಪತ್ತು ಆರೋಗ್ಯವಂತರೂ, ಸಂತೋಷಚಿತ್ತರೂ ಆದ ಪ್ರಜೆಗಳು. ಮಕ್ಕಳ ಆರೋಗ್ಯ ಕಾಪಾಡುವುದು ನಮ್ಮೆಲ್ಲರ ಮುಖ್ಯ ಕರ್ತವ್ಯ.

“ಚಿಕಿತ್ಸೆಗಿಂತ ಪ್ರತಿರೋಧಕ ಒಳ್ಳೆಯದು.”

ಆದ್ದರಿಂದ ಮಕ್ಕಳಿಗೆ ರೋಗ ಬಾರದಂತೆ ಸಂರಕ್ಷಣೆ ಮಾಡಬೇಕು. ಮಕ್ಕಳಿಗೆ ಬರುವ ಹಲವಾರು ಮಾರಕ ಕಾಯಿಲೆಗಳಲ್ಲಿ ‘ಪೋಲಿಯೋ’ ಕೂಡಾ ಒಂದು. ಮಗು ತಾಯಿ-ತಂದೆಯರಿಗೆ ಮಾತ್ರವಲ್ಲ ಕುಟುಂಬಕ್ಕೇ ಸಮಾಜಕ್ಕೇ ಮತ್ತು ಇಡೀ ವಿಶ್ವಕ್ಕೇ ಅಮೂಲ್ಯವಾದದ್ದು. ಅದರಲ್ಲೂ ಮಕ್ಕಳು ಆರೋಗ್ಯವಾಗಿದ್ದರೆ ಅದೇ ಒಂದು ದೊಡ್ಡ ಭಾಗ್ಯ. ಆರೋಗ್ಯವಂತ ಮಗು ಒಂದು ದೃಢ ಭವಿಷ್ಯವೇ ಸರಿ. ‘ಪೋಲಿಯೋ’ ಲಸಿಕೆಯಿಂದ ತಡೆಯಬಲ್ಲ ಒಂದು ಮಾರಕ ರೋಗ.

ಪೋಲಿಯೋ ಬಹಳ ಹಳೆಯ (ಹಿಂದಿನ) ಕಾಲದಿಂದಲೂ ಬಂದ ಒಂದು ರೋಗ. ಈಜಿಪ್ಟಿನಲ್ಲಿ ಈ ಕಾಯಿಲೆ ಕಾಣಿಸಿ

ಕೊಂಡ ಮಾಹಿತಿ ಕ್ರಿ.ಪೂ. ೧೫೮೦-೧೩೫೦ರ ದಾಖಲೆಗಳ
ಇವೆ. ಪೋಲಿಯೋ ಬಗ್ಗೆ ಭಾರತವು ೧೯೪೯ರ ತನಕ ಹೆಚ್ಚಿ
ಮತ್ತು ಸರಿಯಾದ ಗಮನ ನೀಡಲಿಲ್ಲ. ಅನಂತರ ಐ. ಸಿ. ಎ
ಆರ್. ನವರು ಒಂದು ಸಂಶೋಧನೆಯ ಘಟಕವನ್ನು ಮುಂಬಂ
ಯಲ್ಲಿ ತೆರೆದು ಅದರ ಮುಖ್ಯಸ್ಥರನ್ನಾಗಿ ಡಾ. ಕಾನುದವೆ ಅವ
ನೇಮಕವಾದರು. (ಹಾಫ್‌ಕಿನ್ ಸಂಸ್ಥೆ) ಈ ಸಂಸ್ಥೆ ಸಂಶೋಧ
ನಡೆಸಿದಾಗ ಹೆಚ್ಚಿನ ಮಾಹಿತಿ ದೊರೆತು ನಿವಾರಣೆಗೆ ತುಂಬ
ಅನುಕೂಲವಾಯಿತು.

೧ ಪೋಲಿಯೋ ಒಂದು ವೈದ್ಯಕೀಯ ಸಮಸ್ಯೆ.

೨. ಭಾರತದ ಮಕ್ಕಳಲ್ಲಿ ೨ ವರ್ಷದ ಒಳಗಿನವರಲ್ಲಿ ಶೇಕ
೮೦ ರಷ್ಟು ೩ ವರ್ಷದ ಒಳಗಿನವರಲ್ಲಿ ಶೇಕಡ ೯೦ ರಷ್ಟು ಕಂಡ
ಬಂದಿದೆ.

೩. ಮಗುವಿಗೆ ಪೋಲಿಯೋ ಬಹುಬೇಗ ಅಂದರೆ ಆ
ತಿಂಗಳ ವಯಸ್ಸಿನಲ್ಲೇ ತಗುಲಬಹುದು. ಅಲ್ಲಿಯ ತನ
ಪ್ರಾಕೃತಿಕ ರೋಗನಿರೋಧಕ ಶಕ್ತಿಯನ್ನು ತಾಯಿಯ ಹಾಲಿ
ಮುಖಾಂತರ ಪಡೆಯುವುದು.

೪. ಬಹು ಪಾಲು ಮಕ್ಕಳು ಮೊದಲ ಅವಧಿಯಲ್ಲಿ ದುರ್ಬ
ಸೋಂಕನ್ನು ಪಡೆದಾಗ ಪೋಲಿಯೋ ಉಂಟಾಗುವುದಿಲ್ಲ.

೫. ಈ ದುರ್ಬಲ ಸೋಂಕು ದೇಹಕ್ಕೆ ಪೋಲಿಯೋ ರೋ
ನಿರೋಧ ವಸ್ತು (Antibodies) ಗಳನ್ನು ಒದಗಿಸುತ್ತದೆ.

೬. ಇದರಿಂದ ಐದು ವರ್ಷಗಳಾಗುವಷ್ಟರಲ್ಲಿ ಮ
ಮೂರು ಬಗೆಯ ಪೋಲಿಯೋ ವಿಷಕಣ (virus)ಗಳ ಸೋಂ
ತಗುಲಿ ರೋಗವನ್ನು ತಡೆಗಟ್ಟುವ (Immunity)ನೈಸರ್ಗಿ
ರಕ್ಷಾ ಶಕ್ತಿಯನ್ನು ಬೆಳೆಸಿಕೊಂಡಿರುತ್ತದೆ.

೭. ಪೋಲಿಯೋ ವಿಷಕಣಗಳಲ್ಲಿ ಮೂರು ವಿಧ.

(ಅ) ಬ್ರೂನೈಲ್ಡ್ (Brunilde)

(ಆ) ಲಾನ್‌ಸಿಂಗ್ (lonsing)

(ಇ) ಲಿಯಾನ್ (leoin)

ಮೊದಲನೆಯದಾದ ಬ್ರೂನೈಲ್ಡ್ ತುಂಬಾ ವಿಷಕಾರಿ, ಮೂರನೆಯ ಲಿಯಾನ್ ಸಹ ವಿಷಕಾರಿ.

೮. ಈ ಸಂದರ್ಭದಲ್ಲಿ ಮೊಟ್ಟಮೊದಲು ೧೯೫೫ರಲ್ಲಿ ಡಾ. ಜಾನ್ಸ್ ಸಾಲ್ಕ್ ಮತ್ತು ೧೯೬೧ರಲ್ಲಿ ಡಾ. ಸ್ಯಾಬಿನ್ ಎಂಬ ವಿಜ್ಞಾನಿಗಳು ಪೋಲಿಯೋ ತಡೆಗಟ್ಟುವ ಲಸಿಕೆಗಳನ್ನು ತಯಾರಿಸಿ ರೋಗ ನಿವಾರಣೆ ಬಗ್ಗೆ ತಮ್ಮ ಸಿದ್ಧಾಂತವನ್ನು ಮಂಡಿಸಿದರು.

೯. ಈ ಲಸಿಕೆಗಳನ್ನು ಬಹುರಾಷ್ಟ್ರಗಳು ಉಪಯೋಗಿಸಿ ಹೆಚ್ಚಿನ ಪ್ರಜೆಗಳನ್ನು ಪೋಲಿಯೋ ಹಿಡುಗಿನಿಂದ ಪಾರು ಮಾಡಿದ್ದಾರೆ, ಮಾಡುತ್ತಲೂ ಇದ್ದಾರೆ. ಅಮೆರಿಕಾದಂತಹ ಮುಂದುವರಿದ ದೇಶಗಳಲ್ಲಿ ಪೋಲಿಯೋ ವ್ಯಾಧಿಗೆ ತುತ್ತಾದ ಪ್ರಕರಣಗಳೇ ಇಲ್ಲ.

೧೦. ದುರದೃಷ್ಟವಶಾತ್ ನಮ್ಮ ಭಾರತ ಪೋಲಿಯೋ ರೋಗದಿಂದ ಇನ್ನೂ ಪೂರ್ಣವಾಗಿ ಮುಕ್ತವಾಗಿಲ್ಲ. ಇದಕ್ಕೆ ಕಾರಣ, ಲಸಿಕೆಯ ದೋಷವಲ್ಲ ಬೇರೇನೋ ಇರಬಹುದೆಂಬ ಶಂಕೆ ಇದೆ.

೧೧. ಬಹುಶಃ ಸುತ್ತ-ಮುತ್ತಲಿನ ಪರಿಸ್ಥಿತಿ ಮತ್ತು ಲಸಿಕೆ ಉಪಯೋಗಿಸುವ, ಶೇಖರಿಸುವ ರೀತಿ ನೀತಿಗಳೇ ಇರಬಹುದು.

'ವಿಶ್ವ ಆರೋಗ್ಯ ದಿನಾಚರಣೆ ೧೯೯೫'ರ ಘೋಷಣೆ: "೨೦೦೦ ಇಸವಿ ವೇಳೆಗೆ ಪೋಲಿಯೋ ರಹಿತ ವಿಶ್ವ".

೧. ಪೋಲಿಯೋ ವ್ಯಾಧಿ ಸಾರ್ವಜನಿಕ ಆರೋಗ್ಯ ಸಮಸ್ ಗಳಲ್ಲಿ ಬಹು ಮುಖ್ಯ ಮತ್ತು ಅಪಾಯಕಾರಿಯಾದದ್ದು.

೨. ಪೋಲಿಯೋ ತಗುಲಿದ ಮಕ್ಕಳಲ್ಲಿ ಶಾಶ್ವತ ಅಂ ವಿಕಲತೆ ಉಂಟಾಗುವುದು.

೩. ವಿಶ್ವ ಆರೋಗ್ಯ ದಿನಾಚರಣೆ ೭-೪-೧೯೯೫ರಂದ ನೆರೆಯ ೧೫ ರಾಷ್ಟ್ರಗಳು ತಮ್ಮ ಮಕ್ಕಳಿಗೆ ಪೋಲಿಯೋ ಲಸಿ ಯನ್ನು ಏಕ ಕಾಲದಲ್ಲಿ ನೀಡುವ ನಿರೀಕ್ಷೆ ಇದೆ.

೪. ಇದರಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾರಂಭಿಸಿ ಈ ಕಾರ್ಯ ಯಶಸ್ವಿಯಾಗಿ ಅನಂತರ ಹಂತ ಹಂತವಾಗಿ ರಾಜ ಗಳಲ್ಲಿ ಮತ್ತು ರಾಷ್ಟ್ರಗಳ ಮಟ್ಟದಲ್ಲಿ ಪೋಲಿಯೋ ನಿರ್ಮೂಲ ಆಗುವುದು. ಆಗ “೨೦೦೦ ಇಸವಿ ವೇಳೆಗೆ ಪೋಲಿಯೋ ರಹಿತ ವಿಶ್ವ” ಎಂಬುದರಲ್ಲಿ ಸಂದೇಹವಿಲ್ಲ.

೫ ಪೋಲಿಯೋ ಪಿಡುಗಿನಿಂದ ಮುಕ್ತರಾಗುವುದು ಬಿಡ ವುದು ನಮ್ಮ ಕೈಯಲ್ಲಿಯೇ ಇದೆ.

೬. ಇಂದು ಪೋಲಿಯೋದಿಂದ ನಾವು ಪಾರಾಗಿ ಸಂತೋ ಪಟ್ಟರೆ ಮುಂದೆ ನಮ್ಮ ಪೀಳಿಗೆಯೂ ಮುಕ್ತರಾಗುವರೆಂ ಹೆಮ್ಮೆ ನಮ್ಮದಾಗುವುದು.

ಪೋಲಿಯೋ ನಿರ್ಮೂಲನೆ ಮಾಡುವ ಮೊದಲು ನಾ ಅದರ ಬಗ್ಗೆ ಹಲವು ಅಂಶಗಳನ್ನು ಅರಿಯಬೇಕು.

(ಅ) ರೋಗದ ಹುಟ್ಟು ಗುಣಗಳೇನು ?

(ಆ) ರೋಗ ಹರಡುವ ವಿಧಾನಗಳೇನು ?

(ಇ) ಯಾವ ಲಸಿಕೆಯನ್ನು ಕೊಡುವುದು ಸೂಕ್ತ ?

(ಈ) ಕೊಡುವ ಲಸಿಕೆ ಹೇಗೆ ಕಾರ್ಯ ಮಾಡುವುದು ?

(ಉ) ಕೊಟ್ಟ ಲಸಿಕೆಯು ಕಾರ್ಯವನ್ನು ನಿರ್ಬಂಧಿಸುವು ಯಾವುದು ?

ಭಾರತದ ಜನಸಂಖ್ಯೆಯಲ್ಲಿ ಶೇಕಡ ೪೨.೫ ಮಕ್ಕಳು ೧೪ ವರ್ಷದವರು. ಇವರಲ್ಲಿ

೧ ವರ್ಷದೊಳಗಿನವರು ಶೇಕಡ ೩.

೧ ರಿಂದ ೩ ವರ್ಷದವರು ಶೇಕಡ ೬.

೩ ರಿಂದ ೫ ವರ್ಷದವರು ಶೇಕಡ ೮.

ಒಟ್ಟು ೧ ರಿಂದ ೫ ವರ್ಷದವರು ಶೇಕಡ ೧೭.

(ಅ) ಪೋಲಿಯೋ ಮೂರು ವರ್ಷದ ಒಳಗಿನ ಅದರಲ್ಲೂ ೨ ವರ್ಷ ವಯಸ್ಸಿನ ಮಕ್ಕಳನ್ನು ತಗುಲುತ್ತದೆ.

(ಆ) ಆದಕ್ಕಾಗಿಯೇ ಅದನ್ನು ಶಿಶುಸಂಬಂಧಲಕ್ವ (Infantile paralysis) ಎಂದು ಹೇಳುವುದು. ಈ ಪಿಡುಗಿನ ವಿಷಕಣಗಳು ಬಾಯಿ ಮೂಗುಗಳ ಮುಖಾಂತರ ದೇಹವನ್ನು ಪ್ರವೇಶ ಮಾಡುವುವು.

(ಇ) ವಿಷಕಣಗಳ ಚಟುವಟಿಕೆಯು ಕರುಳಿನಲ್ಲಿ ಪ್ರಾರಂಭವಾಗುವುದು.

(ಈ) ಅನಂತರ ರಕ್ತ ಚಲನೆಯನ್ನು ಸೇರಿ ಮತ್ತೂ ಅಭಿವೃದ್ಧಿಯಾಗುವುದು (vireamia)

(ಉ) ಈ ಪಿಡುಗಿನ ಗುರಿದಾಣ ಮಿದುಳು ಮತ್ತು ಮಿದುಳುಬಳ್ಳಿ.

(ಊ) ಅಪರಾಧಿಗಳು ಒಂದು ಗುಂಪಿನ ಬಹು ಸಣ್ಣ ಸಾಮಾಜ್ಞಯುಂರಿಶದ ವಿಷಾಣುಗಳು (Virus).

(ಋ) ವಿಷಾಣುಗಳು ಮನುಷ್ಯನಿಂದಲೇ ಇತರರಿಗೆ ಸಾಗುತ್ತವೆ

(ೠ) ಮಿದುಳು ಮತ್ತು ಮಿದುಳುಬಳ್ಳಿಯಲ್ಲಿ ಈ ವಿಷ ಕಣಗಳು ದೇಹದ ಮಾಂಸಖಂಡಗಳ ಚಲನೆಯನ್ನು ಹತೋಟಿಯಲ್ಲಿ ಇಡುವ ಜೀವಕೋಶ(cells)ಗಳನ್ನು ನಾಶಪಡಿಸುತ್ತವೆ

(ಎ) ನಂತರ ಎರಡು ವಾರಗಳಲ್ಲಿ ದೊರೆಯುವ (ಪಡೆಯುವ ಫಲಿತಾಂಶವೇ ಪಾರ್ಶ್ವವಾಯು.

(ಏ) ಅದೃಷ್ಟವಶಾತ್ ಸೋಂಕು ತಗುಲಿದ ಎಲ್ಲಾ ಮಕ್ಕಳಿಗೂ ಲಕ್ವ ತಗಲುವುದಿಲ್ಲ. ಪ್ರತಿ ೨೦೦ ಮಕ್ಕಳಲ್ಲಿ ಒಂದು ಮಗುವಿಗೆ ಮಾತ್ರ ಪೋಲಿಯೋ ತಗುಲುವುದ ಉಳಿದವರು ಕೆಲವು ನೋವುಗಳಿಂದ ನರಳಿ ಪಾರಾಗುವರು.

(ಐ) ಸಾಂಕ್ರಾಮಿಕ ಸಮಯದಲ್ಲಿ ಹೊರತು ಇತರ ವೇ ನೂತನ ವೈದ್ಯರೂ ಸಹ ಪೋಲಿಯೋ ಎಂದು ಸಂಶಯ ಪ ಲಾರರು. ಒಂದು ವೇಳೆ ಸಂಶಯಪಟ್ಟರೂ ಮಾಡಬಹುದಾ ಕರ್ತವ್ಯ ಕಡಿಮೆಯೇ. ಅಂದರೆ, ಮಗುವಿಗೆ ವಿಶ್ರಾಂತಿ ಮತ್ತು ಮುಂದಿನ ಉಗ್ರತೆಯನ್ನು ಕಡಿಮೆ ಮಾಡಬಹುದಾದ ಸಲ ಅಷ್ಟೇ.

(ಒ) ಪೋಲಿಯೋ ಸಾಂಕ್ರಾಮಿಕತೆಯು ೪ ವರ್ಷಗ ಗೊಮ್ಮೆ ಮರಳಿ ಮರಳಿ ಬರುವ ಉರುಳುವ ಚಕ್ರದಂತೆ.

(ಓ) ಪೋಲಿಯೋ ಬಹು ಅಂಟುರೋಗ. ರೋಗಿಯ ಕರುಳಿನಿಂದ ವಿಷಕಣಗಳನ್ನು ಮಲದ ಮುಖಾಂತರ ೬-೭ವಾ ವಿಸರ್ಜನೆ ಮಾಡುತ್ತಾನೆ. ಮಾನವ ಒಬ್ಬನೇ ಪೋಲಿಯೊ ವ್ಯಾಧಿಯ ವಾಹಕ ಮತ್ತು ಮಲ ಒಂದೇ ಈ ಸೋಂಕ ರೋಗಕ್ಕೆ ಮೂಲ.

(ಔ) ದೇಹದಿಂದ ಹೊರ ಬಂದ ವಿಷಕಣಗಳು ನಾನಾ ರೀತಿಯಲ್ಲಿ ನೊಣಗಳಿಂದ ಆಹಾರ, ಕಲುಷಿತ ಹಾಲು ಮತ್ತು ನೀರುಗಳಿಂದ ಇತರರಿಗೆ ಹರಡುತ್ತವೆ.

(ಅಂ) ಚರಂಡಿಯ ನೀರು ಮಲದಲ್ಲಿನ ವಿಷಕಣಗಳನ್ನು ಕೊಂಡು ಒಯ್ದು ಹರಡುವಿಕೆ ಅತಿಯಾಗುವುದು.

(ಆ) ವಿಷಕಣಗಳು ನೀರು ಮತ್ತು ಹಾಲಿನಲ್ಲಿ ತಿಂಗಳು ಕಾಲ ಜೀವಂತವಾಗಿರುತ್ತದೆ.

(ಇ) ಆಗಾಗ ಸಂಭವಿಸುವ ಕೊಳಕು ಈಜು ಕೊಳಗಳು ನಡುವರ್ತಿಗಳಾಗುವುವು.

(ಉ) ಪೋಲಿಯೋ ಸೋಂಕು ಹೊದಗುವಿಕೆ (Incubation period) ೭ರಿಂದ ೧೪ ದಿನಗಳು.

## ಗುರುತಿಸಬೇಕಾದ ಪೋಲಿಯೋ ವ್ಯಾಧಿಯ ಹಂತಗಳು ಮತ್ತು ಲಕ್ಷಣಗಳು

೧. ಒಳನುಗ್ಗಿದ ಸಮಯ (Invasive) ಆಗ ಕೇವಲ ನೆಗಡಿ ಜ್ವರ ಮುಂತಾದುವುಗಳಲ್ಲಿ ಮರೆಯಾಗುವುದು.

೨. ಕೈಗೂಡದ ಸಮಯ ಕೊನೆಯಲ್ಲಿ ಜ್ವರ ಪ್ರಾರಂಭ ವಾಗುವುದು. (Abortive unknown)

೩. ಲಕ್ವ ವಿಲ್ಲದ ಸಮಯ (Non Paralytic)

ಜ್ವರ, ತಲೆನೋವು, ಸೊಂಟನೋವು, ಕಿರಿಕಿರಿಯಾಗುವುದು, ಕುತ್ತಿಗೆಯ ಮಾಂಸಖಂಡಗಳು ಬಿರುಸಾಗಿ (stiff) ಬಗ್ಗಿಸಲು ತೊಂದರೆ ಉಂಟಾಗುವುದು.

ಪರೀಕ್ಷೆ ಮಾಡಿದಾಗ

(ಅ) ಕುಳಿತ ಮಗು ಕುತ್ತಿಗೆ ಬಗ್ಗಿಸಿ ಮಂಡಿಯನ್ನು ಮುತ್ತಿಡಲು ಸಾಧ್ಯವಾಗದು. ಕಾಲುಗಳನ್ನು ಮಡಿಸಲೇಬೇಕು, ಕಾರಣ ಕತ್ತು ಬಗ್ಗಿಸಲು ಆಗುವುದಿಲ್ಲ (kiss the knee test).

(ಆ) ಕುಳಿತ ಮಗು ತನ್ನ ಸಹಾಯಕ್ಕೆ ತೋಳುಗಳನ್ನು ಹಿಂದಕ್ಕೆ ಚಾಚಿ ಟ್ರೈಪಾಡ್‌ಸೈನ್ ಮಾಡುವುದು. ಕಾರಣ ಸೊಂಟದಲ್ಲಿನ ನೋವು.

(ಇ) ವಿಷಕಣಗಳು ಮಿದುಳು ಸೇರಿವೆ. ಆದರೆ ಜೀವಕಣಗಳನ್ನು ನಾಶ ಮಾಡಿಲ್ಲ. ಆದ್ದರಿಂದ ಪಾರ್ಶ್ವವಾಯು ಆಗಿಲ್ಲ.

(ಈ) ಕಾಲುಗಳನ್ನು ಚುಚ್ಚಿದಾಗ ನೋವಾಗುವುದು.

೪. **ಪಾರ್ಶ್ವವಾಯು ಹಂತ** (Paralytic stage)

ಇದರಲ್ಲಿ ನಾಲ್ಕು ವಿಧಗಳು :

೧. ಬೆನ್ನುಹುರಿಯ ತೊಂದರೆ — (Spinal)
೨. ಮಿದುಳ್ಕಾಂಡದ ತೊಂದರೆ — (Bulbar)
೩. ಎರಡರ ಮಿಲನ — (Bulbo spinal)
೪. ಮಿದುಳಿನಂತಹ ತೊಂದರೆ — (Encephalytic)

**ಮಿದುಳು ಬಳ್ಳಿಯ ತೊಂದರೆ ಕಾಣುವ ಲಕ್ಷಣಗಳು**
**(Spinal type)**

ಜ್ವರ, ನೋವು, ನಿಶ್ಶಕ್ತಿ ನಾಲ್ಕು ದಿನಗಳ ನಂತರ ಲಕ್ವ, ಸಾಮಾನ್ಯವಾಗಿ ಕಾಲುಗಳನ್ನು ಆಡಿಸಲು ಆಗುವುದಿಲ್ಲ. ಕಾಲುಗಳಲ್ಲಿ ಅಸಮ ಪ್ರಮಾಣ ಕಾಣುವುದು (Asymetry)

ಪಾರ್ಶ್ವವಾಯು ಹೆಚ್ಚಾಗಿ ಮುಂದುವರಿದಾಗ ಮೇಲಕ್ಕೆ ಹರಡಿದ ವ್ಯಾಧಿಯಿಂದ ಮಾಂಸಖಂಡಗಳು ದುರ್ಬಲವಾಗಿ ಕುತ್ತಿಗೆ, ತೋಳು, ಹೊಟ್ಟೆ, ಪಸೆ ಮತ್ತು ಕರುಳಿನ ಮಾಂಸಖಂಡಗಳನ್ನು ಆವರಿಸಿ ಉಸಿರಾಡಲು ತೊಂದರೆಯಾಗುವುದು. ಅಲ್ಲದೆ ಧ್ವನಿ ಕಡಿಮೆಯಾಗಿ ಕೆಡುವುದು.

ಕೆಲವು ಸಮಯ ಮೂತ್ರ ನಿಂತು, ಮಲ ವಿಸರ್ಜನೆ ಮಾಡಲು ತೊಂದರೆಯಾಗುವುದು.

## ಮಿದುಳ್ಕಂಡದ ತೊಂದರೆ (Bulbar type)

ಮಿದುಳ್ಕಂಡದ ತೊಂದರೆಯಾದಾಗ ತಲೆಯ ನರಗಳು (Cranial nerves) ಕಾರ್ಯಕ್ಕೆ ಅಡಚಣೆಯಾಗುವುದು. ೯,೧೦,೧೧ ಮತ್ತು ೧೨ ತಲೆಯ ನರಗಳು ಲಕ್ವದ ತೊಂದರೆ ಅನುಭವಿಸುವುದರಿಂದ ನುಂಗಲಾರದ ಎಂಜಲು ಗಂಟಲಿನಲ್ಲಿ ತುಂಬಿಕೊಳ್ಳುವುದು. ಇದರಿಂದ ಉಸಿರಾಡಲು ತೊಂದರೆಯಾಗಿ ಕೆಲವೊಮ್ಮೆ ಪ್ರಾಣಹಾನಿ ಆಗುವುದು.

ಧ್ವನಿ ಕೆಡುವುದು, ಕುಡಿದ ನೀರು, ದ್ರವಗಳು ಮೂಗಿನ ಮುಖಾಂತರ ಹಿಂದಿರುಗಿ ಸೋರುವುದು, ಉಸಿರಾಟದ ವೇಗ ಅತಿಯಾಗುವುದು, ರಕ್ತದ ಒತ್ತಡವೂ ಬದಲಾಗುವುದು.

## ನೋಲ್ಕಂಡ ಎರಡರ ವಿಲೀನ ಸ್ಥಿತಿ (Bulbo spinal)

ರೋಗಿ ಮಂಕಾಗಿ, ಜ್ಞಾನ ಬದಲಾವಣೆಯಿಂದ ಕಿರಿಕಿರಿ ಮಾಡುವುದು, ಮೂರ್ಛೆ ಬಂದು ಜ್ಞಾನ ತಪ್ಪಬಹುದು.

## ಮಿದುಳುರಿತದ ತೊಂದರೆ (Encephalytic)

ಮಿದುಳುರಿತದ ತೊಂದರೆಯಿಂದ ಮಂಕಾದ ಜ್ಞಾಪಕಶಕ್ತಿ, ಜೋಂಪಿನಲ್ಲಿದ್ದು ಆಗಾಗ್ಗೆ ಮೂರ್ಛೆ ಬರುತ್ತಿರುವುದು. ಚಿತ್ತ ಭ್ರಮೆಯಿಂದ ಕೊನೆಗೆ ಗಾಢನಿದ್ರೆ ಆವರಿಸಬಹುದು

## ಪೋಲಿಯೋ ಹಂತಗಳು (Stages of Polio)

೧. ತೀವ್ರಸ್ಥಿತಿ (Acute Stage) ಇದು ಸುಮಾರು ೨ರಿಂದ ೪ ವಾರಗಳು. ಆಗ ಕಾಲಿನ ಮಾಂಸಖಂಡಗಳ ನೋವು ನಿವಾರಣೆಗೆ ಸಿಸ್ಟರ್ ಕೆನ್ನಿಸ್ ವಿಧಾನದ ಚಿಕಿತ್ಸೆ ಜೊತೆಗೆ ಗಟ್ಟಿಯಾದ ಮಂಚದಲ್ಲಿ ಮಲಗಿಸುವುದು ಮುಖ್ಯ.

೨. ಚೇತರಿಕೆ (Convolesent Recovery Stage) ಈ
ಚೇತರಿಸಿಕೊಳ್ಳುವ ಅವಧಿ ೬ ತಿಂಗಳಿಂದ ೨ ವರ್ಷಗಳು.

೩. ಉಳಿದ ಕಾಲ (Residual) ೨ ವರ್ಷಗಳ ನಂತರದ್ದು

## ಪೋಲಿಯೋ ಚಿಕಿತ್ಸೆಯ ಮುಖ್ಯ ಉದ್ದೇಶಗಳು

(ಅ) ಚಿರಸೆಳೆತ ಮತ್ತು (Contractions)

(ಆ) ಶಾಶ್ವತ ವಿಕಲತೆ (Deformity)ಗಳನ್ನು ನಿರೋಧಿಸು ವುದು D/D of Pseudo-(paralysis)

(ಹುಸಿಯುರನಾರಿಯು ವ್ಯತ್ಯಾಸವುಳ್ಳ ರೋಗ ತಿಳಿವು)

೧. ಹೊಡೆತದಿಂದ ಆದದ್ದು–(Trauma)

೨. ಒಡಹುಟ್ಟಿದ ಪರಂಗಿರೋಗ–(Cong. Syphilis)

೩. ರಸಿಕೆ ನರಳಿಕೆ–(Serum Sickness)

೪. ಮೆದು ಮೂಳೆ ರೋಗ–(Rickets)

೫. 'ಸಿ' ಅನ್ನಾಂಗದ ಕೊರತೆಯಿಂದ ಕೈಕಾಲುಗಳಲ್ಲಿ ನೋವು ಕಾಣಿಸುವುದು–(Scurvy)

೬. ಬಿಳ್ಳರ್ ರಕ್ತಕೊರೆ–(Leukacmia)

೭. ನಂಜಿನ ಕೀಲು ನೋವು–(Septic Arthritis)

೮. ಪಾರ್ಶ್ವವಾಯು ಅಲ್ಲದ್ದು–(Non–Paralytic Polio)

೯. ರಕ್ತ ಹೆಪ್ಪುಗಟ್ಟಿದ ಕೀಲು–(Haemarthrosis)

ರೋಗಿಯು ಸಲಹೆಗೆ ಬಂದಾಗ ವೈದ್ಯರು ತಿಳಿಯಬೇಕಾದ ಅಂಶಗಳು

೧. ಪೋಲಿಯೋ ವ್ಯಾಧಿ ತಗುಲದಂತೆ ಮಗುವಿಗೆ ಲಸಿಕೆ

ನೀಡಲಾಗಿದೆಯೋ? ಒಂದು ವೇಳೆ ಲಸಿಕೆ ನೀಡಿದ್ದರೂ ಮಗುವಿಗೆ ಪೋಲಿಯೋ ತಗುಲಬಹುದು. ಕಾರಣವೇನೆಂದರೆ

(ಅ) ಲಸಿಕೆಯನ್ನು ಸಕಾಲದಲ್ಲಿ, ಸಾಕಷ್ಟುಸಾರಿ, ಸರಿಯಾದ ರೀತಿಯಲ್ಲಿ ನೀಡದಿದ್ದರೆ.

(ಆ) ಲಸಿಕೆಯನ್ನು ಸರಿಯಾದ ಪ್ರಮಾಣದಲ್ಲಿ (ಕಡಿಮೆ ಅಥವಾ ಹೆಚ್ಚು) ಕೊಟ್ಟಿದ್ದರೆ.

(ಇ) ನಿಸ್ಸತ್ವದ (Impotent) ಲಸಿಕೆ ಹಾಕಿದ್ದರೆ.

(ಈ) ಲಸಿಕೆಯನ್ನು ಅತಿಸಾರ ಭೇದಿ ಆಗುತ್ತಿರುವ ಸಮಯದಲ್ಲಿ ನೀಡಿದ್ದರೆ.

೨. ಪೋಲಿಯೋ ತಗುಲಿ ಇನ್ನೂ ಪ್ರಬಲವಾಗದಿದ್ದ ವೇಳೆಯಲ್ಲಿ ಯಾವುದಾದರೂ ಚುಚ್ಚುಮದ್ದು ಕೊಟ್ಟಿದ್ದರೆ, ಕೊಡಿಸಿದ್ದರೆ-ಚುಚ್ಚುಮದ್ದು ಪ್ರಚೋದಿಸಿದ ಪಾರ್ಶ್ವವಾಯು ಆಗಬಹುದು, ಪೋಲಿಯೋ ಲಸಿಕೆ ಹಾಕಿದ ಕೂಡಲೆ ಮಗು ವಾಂತಿ ಮಾಡಿರಬಹುದು. (ಆಗ ಸಕ್ಕರೆಯೊಡನೆ ಮತ್ತೊಮ್ಮೆ ೨ ಹನಿಗಳನ್ನು ಹಾಕಬೇಕು)

## ಪೋಲಿಯೋ ಸಾಂಕ್ರಾಮಿಕ ರೋಗ ತಲೆದೋರಿದಾಗ ಮಕ್ಕಳು ಮತ್ತು ಪೋಷಕರು ಪಾಲಿಸಬೇಕಾದ ಸರಳ ಸೂತ್ರಗಳು

೧. ಅತಿಯಾದ ಆಯಾಸಪಡಬಾರದು ಮತ್ತು ಅಹಿತಕರ ಚಳಿಯಿಂದ ದೂರವಿರಬೇಕು.

೨. ಯಾವ ವಿಧದ ಚುಚ್ಚುಮದ್ದು ಹಾಕಿಸಬಾರದು

೩. ಗಂಟಲಿನ ಯಾವುದೇ ಚಿಕಿತ್ಸೆ ಮಾಡಿಸಬಾರದು

೪. ಜನ ಸಮೂಹದ ಸ್ಥಳಗಳಲ್ಲಿ ಸೇರಬಾರದು

೫. ಈಜುಕೊಳಗಳಿಗೆ ಇಳಿದು ಸ್ನಾನಮಾಡಬಾರದು

೬. ಪೋಲಿಯೋ ಲಸಿಕೆ ೨ (ಹನಿಗಳಲ್ಲಿ) ಮೊದಲು ಸಾ ಮತ್ತು ಎರಡನೇ ಬಾರಿ ಹಾಕುವಾಗ ಮುಂಚೆ ಮತ್ತು ನಂತ ತಾಯಿಹಾಲು ಅಥವಾ ಬಿಸಿದ್ರವಗಳನ್ನು ಮಗುವಿಗೆ ಕುಡಿ ಬಾರದು ಎಂದು ಹಿಂದೆ ಇತ್ತು ಈಗ ಆ ನಿರ್ಬಂಧನೆ ಇ ಕುಡಿಸಬಹುದು.

**ಪೋಲಿಯೋ ಎಂದು ಯಾವಾಗ ಸಂಶಯಪಡಬೇಕು**

ಮೂರು ವರ್ಷದ ಒಳಗಿನ ಮಕ್ಕಳಲ್ಲಿ

೧. ಜ್ವರವು ಇದ್ದಕ್ಕಿದ್ದಂತೆ ಬಂದಿರುವ ಸಂಗತಿ ತಿಳಿದಾ

೨. ಆಕಸ್ಮಿಕವಾಗಿ ಕಾಲಿನಲ್ಲಿ ನೋವು, ಬಲಹೀನತೆ ಕಂಡ ಬಂದು ತಿರುಗಾಡಲು ಆಗದಿದ್ದಾಗ

೩. ಅಳುತ್ತಿರುವ ಮಗುವಿನ ಹೊಟ್ಟೆಯ ಭಾಗದ ಬೆಲೂನಿನಂತೆ ಊತ ಕಾಣಬದಾಗ (ಮಾಂಸಖಂಡಗ ದುರ್ಬಲತೆಯಿಂದ) Phantom Hemia

೪. ಜ್ವರ ಬಂದು ಮೂರು ದಿನಗಳಾದರೂ ಬೇರೆ ಲಕ್ಷ ಗಳು ಕಾಣದಿರುವಾಗ (ಪ್ರಗತಿ ಇಲ್ಲದ ಪಾರ್ಶ್ವವಾಯು ಅವಧಿ

೫. ಮಗು ಕುಳಿತಾಗ ಕುತ್ತಿಗೆ ನೆಟ್ಟಗೆ ನಿಲ್ಲದೆ ಮುಂದಕ ಬಾಗಿ ಬೀಳುವುದು (ದುರ್ಬಲಗೊಂಡ ಕುತ್ತಿಗೆ ಮಾಂಸಖಂ ಗಳಿಂದ)

೬. ಬದಲಾದ ಧ್ವನಿ ಕೇಳಿಬಂದಾಗ (ಮತ್ತು ಗಂಟಲಿನ ಎಂಜಲು ನುಂಗಲು ಕಷ್ಟವಾದಾಗ)

೭. ಮಗು ಕುಳಿತಾಗ ತನ್ನ ತೋಳುಗಳನ್ನು ಹಿಂದಕ ಚಾಚಿ ಸಹಾಯ ಪಡೆಯುವುದು (ಸೊಂಟದ ಮಾಂಸಖಂಡಗ ದುರ್ಬಲತೆ ಕಾರಣ)

Annual Incidence Rate of Poliomyolitis per 1000 Children (0–4 years)

ಮಕ್ಕಳಲ್ಲಿ ಸಂಭವ ದರ ಪ್ರತಿ ೧೦೦೦ಕ್ಕೆ

| | Rural ಗ್ರಾಮಾಂತರ | Urban ನಗರ |
|---|---|---|
| ೧. ಆಂಧ್ರಪ್ರದೇಶ | ೧.೭ | ೧.೪ |
| ೨. ಗುಜರಾತ್ | ೨.೫ | ೨.೨ |
| ೩. ಹರಿಯಾಣ ಪಂಜಾಬು ಮತ್ತು ಚಂಡೀಘಡ್ | ೩.೧ | ೧.೭ |
| ೪. ಕರ್ನಾಟಕ, ಗೋವ | ೧.೨ | ೧.೨ |
| ೫ ಮಧ್ಯಪ್ರದೇಶ (ಭೂಪಾಲ್ ಮತ್ತು ಜಬ್ಬಲ್‌ಪುರ) | ೧.೯ | ೧.೭ |
| ೬. ಮಹಾರಾಷ್ಟ್ರ | ೧.೪ | ೧.೩ |
| ೭. ಒರಿಸ್ಸಾ | ೦.೮ | ೦.೭ |
| ೮. ರಾಜಾಸ್ಥಾನ (ಜಯಪುರ ವಿಭಾಗ) | ೩.೧ | ೨.೫ |
| ೯. ತಮಿಳುನಾಡು ಮತ್ತು ಪಾಂಡಿಚರಿ | ೧.೯ | ೨.೧ |
| ೧೦. ಉತ್ತರ ಪ್ರದೇಶ (ಅಲಹಾಬಾದ್ ವಿಭಾಗ) | ೨.೩ | ೧.೬ |
| ೧೧. ಪಶ್ಚಿಮ ಬಂಗಾಳ | ೦.೮ | ೧.೦ |
| ಒಟ್ಟು–ಭಾರತದಲ್ಲಿ | ೧.೭ | ೧.೬ |

ಭಾರತದಲ್ಲಿ ಪೋಲಿಯೋ ನಿರೀಕ್ಷೆಯ ಸಾರಾಂಶ.

ಪೋಲಿಯೋ ಸಾಂಕ್ರಾಮಿಕತೆ ಇದ್ದಾಗ

೧. ಮೂರು ವರ್ಷದ ಒಳಗಿನ ಮಕ್ಕಳಿಗೆ ಜ್ವರ ಕಾಣಿ ಕೊಂಡು ಚಿಕಿತ್ಸೆ ಪಡೆಯಲು ವೈದ್ಯರ ಹತ್ತಿರ ಹೋದಾಗ ವೈದ ರನ್ನು ಸೂಜಿ ಹಾಕಲು ಒತ್ತಾಯ ಮಾಡಬೇಡಿ.

೨. ವೈದ್ಯರು ತಮ್ಮ ಬಳಿ ಬಂದ ರೋಗಿಯ ತೊಂದ ಯನ್ನು ಸರಿಯಾಗಿ ಕೇಳಿ, ಕ್ರಮ ಬದ್ಧವಾಗಿ ಪರೀಕ್ಷಿ ದೃಢೀಕರಿಸಿ ನಂತರ ಸಮಂಜಸವಾದ ಚಿಕಿತ್ಸೆ ಮತ್ತು ಸಲ ನೀಡಿ.

೩. ವೈದ್ಯರು, ಆರೋಗ್ಯ ಕಾರ್ಯಕರ್ತರು ಮಕ್ಕಳಿ ಸಾಧ್ಯವಾದಷ್ಟು ಚುಚ್ಚುಮದ್ದು ಹಾಕುವುದನ್ನು ದೂರ ಮಾಡಿ

೪. ಪೋಷಕರು ಕೇಳುವ, ವೈದ್ಯರು ನೀಡುವ " ಚುಚ್ಚುಮದ್ದೇ ಮಗುವಿಗೆ ಅಂಗವಿಕಲತೆಯನ್ನು ಪ್ರಚೋದಿ ಬಹುದು.''

೫. ಏನೂ ಅರಿಯದ ಮಕ್ಕಳಿಗೆ ನೀಡಿದ ಚುಚ್ಚುಮದ ನಿಂದ ಮುಂದೆ ಶಾಶ್ವತ ಅಂಗವಿಕಲರಾದರೆ, ಆಗ ಯಾರನ್ ದೂರುವುದು ಬೇಡ.

೬. ಪೋಲಿಯೋ ತಗುಲಿದಾಗ ಪ್ರಾರಂಭದಲ್ಲೇ (ಮೊದ ೨-೪ ವಾರಗಳಲ್ಲಿ) ಭೌತಿಕರೋಗ ಚಿಕಿತ್ಸೆ (Physio therap ತೇಲ್ ಮಾಲೀಸ್ (oil massage) ಮಾಡಬಾರದು.

## ಪೋಲಿಯೋ ನಿರ್ಮೂಲನೆಗೆ ೧೨ ಸೂತ್ರಗಳು

### ೧. ಲಸಿಕೆ ಕಾರ್ಡ್ ನೀಡಿಕೆ

ಪ್ರತಿಯೊಂದು ಮಗುವಿಗೂ ಒಂದು ಲಸಿಕೆ ಕಾರ್ಡ್ ತೆರೆದು ಆಗಾಗ್ಗೆ ಪ್ರತಿ ವಿವರಗಳನ್ನು ದಾಖಲು ಮಾಡಬೇಕು.

### ೨. ನಿಗದಿತ ಲಸಿಕೆ ದಿನ ಆಚರಣೆ

ಎಲ್ಲಾ ಸರ್ಕಾರಿ ಹಾಗೂ ಖಾಸಗಿ ಆರೋಗ್ಯ ಸಂಸ್ಥೆಗಳು, "ಗುರುವಾರ"ದಂದು ಲಸಿಕೆ ನೀಡಬೇಕು. ಆಗ ಶೀತಕಸರಪಣಿ ಗುಣಾತ್ಮಕ ಇರುವುದಲ್ಲದೆ, ಕಾರ್ಯಕ್ರಮವು ವಿಶ್ವಾಸಾರ್ಹತೆಯನ್ನು ಗಳಿಸುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಳ ಮತ್ತು ವೇಳೆಯನ್ನು ಅನುಸರಿಸಬೇಕು.

### ೩. ಕ್ಯಾಚ್ ಅಪ್ ಲಸಿಕೆ ನೀಡಿಕೆ (ವಿಶೇಷ ಲಸಿಕೆ ದಿನಗಳು)

ಪ್ರತಿ ವರ್ಷವೂ ಅಕ್ಟೋಬರ್ ಮತ್ತು ಡಿಸೆಂಬರ್ ತಿಂಗಳುಗಳ ಮೊದಲಿನ ಭಾನುವಾರದಂದು ಎಲ್ಲಾ ಸಂಘ–ಸಂಸ್ಥೆಯವರು ಒಟ್ಟುಗೂಡಿ ಹೆಚ್ಚಿನ ಮಕ್ಕಳಿಗೆ ಈ ವಿಶೇಷ ಲಸಿಕೆ ನೀಡಲು ಶ್ರಮ ವಹಿಸಬೇಕು. ಅದರಲ್ಲೂ ಲಸಿಕೆ ನೀಡಿಕೆ ಕಡಿಮೆ ಪ್ರಗತಿ ಆಗಿರುವ ಪ್ರದೇಶಗಳು, ಪಟ್ಟಣ ಮತ್ತು ನಗರದ ಕೊಳಚೆ ಪ್ರದೇಶಗಳಲ್ಲಿ ಈ ರೀತಿ ವಿಶೇಷ ಕಾರ್ಯಕ್ರಮ ಅತಿ ಮುಖ್ಯ.

### ೪. ಪೋಲಿಯೋ ಪ್ರಕರಣದ ವರದಿ

ಸಂಶಯಾಸ್ಪದ ಹಾಗೂ ಹೊಸದಾಗಿ ಪೋಲಿಯೋ ಪ್ರಕರಣವನ್ನು ಐದು ವರ್ಷದ ಒಳಗಿನ ಮಕ್ಕಳಲ್ಲಿ ಕಂಡ ಕೂಡಲೇ ೨೪ ಘಂಟೆ ಒಳಗೆ ಜಿಲ್ಲಾ ಆರೋಗ್ಯಾಧಿಕಾರಿ/ತಾಯಿ ಮಕ್ಕಳ ಚಿಕಿತ್ಸಾ ಅಧಿಕಾರಿಗಳಿಗೆ ದೂರವಾಣಿ/ತಂತಿ

ಸಂದೇಶ ಅಥವಾ ಅಂಚೆ ಕಾರ್ಡಿನ ಮುಖಾಂತರ ವರದಿ ಮಾಡ
ಬೇಕು. ಇದು ಬಹು ಮುಖ್ಯವಾದ ಅಂಶ.

**೫. ಪ್ರಕರಣ ಪಟ್ಟಿ**

ಇಂತಹ ಸಂಶಯಾಸ್ಪದ ಹಾಗೂ ಹೊಸ ಪೋಲಿಯೋ ಪ್ರಕರಣಗಳನ್ನು ಪಟ್ಟಿ ಮಾಡಿ ಅದರಲ್ಲಿ ಹೆಸರು, ವಯಸ್ಸು, ಲಿಂಗ, ವಿಳಾಸ, ತಲೆದೋರಿದ ದಿನಾಂಕ, ತನಿಖೆ ದಿನಾಂಕ, ವರದಿ ಮಾಡಿದ ದಿನಾಂಕಗಳ ವಿವರಗಳನ್ನು ನಮೂದಿಸಿ ಮೇಲಧಿಕಾರಿಗಳಿಗೆ ಕಳುಹಿಸಬೇಕು.

**೬. ದೃಢೀಕರಣ**

ಸಂಶಯಾಸ್ಪದ ಹಾಗೂ ಹೊಸ ಪೋಲಿಯೋ ಪ್ರಕರಣಗಳ ಹತ್ತಿರದ ಆರೋಗ್ಯ ಕೇಂದ್ರ/ಘಟಕದ ವೈದ್ಯರು ರೋಗಿಗಳನ್ನು ವಿವರವಾಗಿ ಪರೀಕ್ಷಿಸಿ, ಪೋಲಿಯೋ ವ್ಯಾಧಿಯೇ ಎಂದು ದೃಢ ಪಡಿಸಿ ಕೊಳ್ಳಬೇಕು.

**೭. ರಿಂಗ್ ಲಸಿಕೆ ನೀಡಿಕೆ**

ಸಂಶಯಾಸ್ಪದ ಹಾಗೂ ಹೊಸ ಪೋಲಿಯೋ ಪ್ರಕರಣ ತಲೆ ತೋರಿದ ಆಯಾಗ್ರಾಮ/ಉಪಕೇಂದ್ರದ ವ್ಯಾಪ್ತಿಯಲ್ಲಿ ಇರುವ ಮೂರು ವರ್ಷದ ಕೆಳಗಿನ ಎಲ್ಲಾ ಮಕ್ಕಳಿಗೂ ಈಗಾಗಲೇ ಲಸಿಕೆ ಪಡೆದುಕೊಂಡಿದ್ದನ್ನು ಗಣನೆಗೆ ತೆಗೆದುಕೊಳ್ಳದೆ ೬ ದಿವಸದೊಳಗೆ ಒಂದು ಸಲ ಲಸಿಕೆಯನ್ನು (೨ ಹನಿ) ಹಾಕ ಬೇಕು ಮತ್ತು ಒಂದು ತಿಂಗಳ ನಂತರ ಎರಡನೇ ಸುತ್ತಿ ಪೋಲಿಯೋ ಲಸಿಕೆ ಹಾಕಬೇಕು. ಅಂದರೆ ಗ್ರಾಮದ ವ್ಯಾಪ್ತಿಗೆ ಬರುವ ೫ ಸಾವಿರ ಮಕ್ಕಳಿಗೆ ಅಥವಾ ೫ ಕಿಲೋಮೀಟರ್ ನಲ್ಲಿರುವ ಎಲ್ಲಾ ಮಕ್ಕಳಿಗೆ ಲಸಿಕೆ ಹಾಕಬೇಕು.

### ೮. ಪ್ರಕರಣ ಪತ್ತೆ ಹಚ್ಚುವಿಕೆ

ಸಂಶಯಾಸ್ಪದ ಹಾಗೂ ಹೊಸ ಪೋಲಿಯೋ ಪ್ರಕರಣದ ವರದಿ ಆದಲ್ಲಿ ಆರೋಗ್ಯ ಸಿಬ್ಬಂದಿ, ಸಾರ್ವಜನಿಕರು ಶ್ರಮವಹಿಸಿ ಇಂತಹ ಪ್ರಕರಣಗಳು ಇನ್ನೂ ಇರುವುದನ್ನು ಪತ್ತೆ ಹಚ್ಚಿ, ಪೃಥಕರಿಸಿ, 'ರಿಂಗ' ಲಸಿಕೆ ನೀಡಿಕೆ' ಕಾರ್ಯಕ್ರಮ ಕೈಗೊಳ್ಳಬೇಕು.

### ೯. ಖಚಿತ ಪೋಲಿಯೋ ಪ್ರಕರಣ

ಪೋಲಿಯೋ ತಗುಲಿದ ಮಗುವನ್ನು ೬೦ ದಿನಗಳು ಅನುಸರಿಕೆ (Follow up) ಮಾಡಿ ಪುನಃ ಪರೀಕ್ಷೆ ಮಾಡಿ ಪಾರ್ಶ್ವವಾಯು ಇದ್ದಲ್ಲಿ ಮಾತ್ರ ಅದು ಖಚಿತವಾದ ಪೋಲಿಯೋ ಪ್ರಕರಣವೆಂದು ಪರಿಗಣಿಸಬೇಕು.

### ೧೦. ಮಾಪ್ ಅಪ್ ಲಸಿಕೆ ನೀಡಿಕೆ

ಮಾಪ್ ಅಪ್ ಲಸಿಕೆ ಹಾಕಿದ ಹಿಂದಿನ ಸಾರಿ ಕಾರಣಾಂತರದಿಂದ ಬಿಟ್ಟು ಹೋಗಿದ್ದ ಮಕ್ಕಳನ್ನು ಪತ್ತೆ ಮಾಡಿ ಅಂತಹವರಿಗೆ ಲಸಿಕೆ ಹಾಕಬೇಕು. ಅಲ್ಲದೆ ಕರ್ನಾಟಕ ರಾಜ್ಯದಲ್ಲಿನ ಪರಿಸ್ಥಿತಿಯಂತೆ ಪೋಲಿಯೋ ಪ್ರಕರಣಗಳು ಮಾರ್ಚ ತಿಂಗಳಿಂದ ಹೆಚ್ಚಾಗುತ್ತಾ ಜೂನ್ ಮತ್ತು ಜುಲೈ ತಿಂಗಳಲ್ಲಿ ಗರಿಷ್ಠ ಮಿತಿಯನ್ನು ಮುಟ್ಟಿ ನಂತರ ಕಡಿಮೆ ಆಗುವುದು. ಹೀಗೆ ಹೆಚ್ಚಾಗಿ ಹರಡುವ ಅಂದರೆ ಮಳೆಗಾಲಕ್ಕೆ ಮುಂಚೆಯೇ ಸಮುದಾಯದಲ್ಲಿ ಮಾಪ್ ಅಪ್ ಲಸಿಕೆಯನ್ನು ಜನವರಿಯಿಂದ ಏಪ್ರಿಲ್ ತಿಂಗಳಲ್ಲಿ ಹಾಕಬೇಕು.

ಹಿಂದಿನ ವರ್ಷದಲ್ಲಿ ಪೋಲಿಯೋ ಪ್ರಕರಣಗಳು ವರದಿ ಆಗಿದ್ದ ಗ್ರಾಮ, ಉಪಕೇಂದ್ರದ ವ್ಯಾಪ್ತಿಯಲ್ಲಿ ಇರುವ ಮೂರು ವರ್ಷದ ಒಳಗಿನ ಎಲ್ಲಾ ಮಕ್ಕಳಿಗೂ ಈಗಾಗಲೇ ಲಸಿಕೆ

ಪಡೆದುಕೊಂಡಿದ್ದನ್ನು ಗಣನೆಗೆ ತೆಗೆದುಕೊಳ್ಳದೆ ಒಂದು ತಿಂಗಳ ಅಂತರದಲ್ಲಿ ಎರಡು ಸಾರಿ ಪೋಲಿಯೋ ಲಸಿಕೆ (೨ ಹನಿ) ಹಾಕಬೇಕು.

## ೧೧. ಸಮುದಾಯ ಆಧಾರಿತ ವರದಿ ವ್ಯವಸ್ಥೆ

ಪೋಲಿಯೋ ನಿರ್ಮೂಲನೆ ಯಶಸ್ವಾಗಲು ಸಮುದಾಯದಲ್ಲಿ ಉಪಾಧ್ಯಾಯರು, ಸಂಘ-ಸಂಸ್ಥೆಯವರು, ಜನಾಭಿಪ್ರಾಯದ ಮುಖಂಡರುಗಳು ಗ್ರಾಮದ ಮಟ್ಟದಲ್ಲಿ ಸಾರ್ವಜನಿಕರು ಸಂಶಯಾಸ್ಪದ ಹಾಗೂ ಹೊಸದಾದ ಪ್ರಕರಣಗಳನ್ನು ಆರೋಗ್ಯ ಸಿಬ್ಬಂದಿಗೆ/ಆರೋಗ್ಯ ಸಂಸ್ಥೆಗೆ ಕೂಡಲೇ ವರದಿ ಮಾಡಿ ಸಹಕರಿಸಬೇಕು.

## ೧೨. ಪೋಲಿಯೋ ಲಸಿಕೆ ಪರೀಕ್ಷೆ

ಪ್ರತಿಯೊಂದು ಆರೋಗ್ಯ ಕೇಂದ್ರಗಳಲ್ಲಿ ಶೇಖರಿಸಿ ಪೋಲಿಯೋ ಲಸಿಕೆಯನ್ನು ಆಗಾಗ್ಗೆ ಪರೀಕ್ಷೆಗೆ ಒಳಪಡಿಸಬೇಕು ಇದರ ಫಲಿತಾಂಶವು ಶೀತಲ ಸರಪಣಿಯ ಗುಣಾತ್ಮಕವನ್ನು ಸೂಚಿಸುತ್ತದೆ. ಆಗ ಸಮರ್ಪಕವಾದ ಲಸಿಕೆಯನ್ನು ಉಪಯೋಗಿಸಿ ಗುರಿ ಸಾಧಿಸಲು ಸಹಾಯಕ ಆಗುವುದು.

೧೨೦ ದಶಲಕ್ಷ ಮಕ್ಕಳಿಗೆ ಪೋಲಿಯೋ ಲಸಿಕೆ ಹಾಕಿ ರೋಗ ನಿರ್ಬಂಧಿಸಲು ತಗುಲುವ ವೆಚ್ಚ ೧೩ ದಶಲಕ್ಷ ರೂಪಾಯಿಗಳು

''ಆಶಾರಹಿತವಾದ ಒಬ್ಬ ಅಂಗವಿಕಲನಿಗೆ ಚಿಕಿತ್ಸೆಯ ಖರ್ಚು ವ್ಯವಸ್ಥೆ ಮಾಡುವುದಕ್ಕಿಂತ ೧೦೦ ಮಕ್ಕಳಿಗೆ ಲಸಿಕೆ ಹಾಕಿ ಪೋಲಿಯೋ ವ್ಯಾಧಿ ತಡೆಗಟ್ಟುವುದು ಮಿತವ್ಯಯ ಕಾರ್ಯ.''

ಸತತವಾಗಿ ಮೂರು ವರ್ಷಗಳು ಯಾವುದೇ ಪೋಲಿಯೋ ಪ್ರಕರಣ ವರದಿಯಾಗದಿದ್ದರೆ ಆ ಜಿಲ್ಲೆ ಪೋಲಿಯೋ ಮುಕ್ತ ಜಿಲ್ಲೆ ಎಂದು ಘೋಷಿಸಬಹುದಾಗಿದೆ.

೧೯೯೪ರ ಇಡೀ ವರ್ಷ ಕರ್ನಾಟಕ ರಾಜ್ಯದಲ್ಲಿ ಒಟ್ಟು ೬೪೮ ಪೋಲಿಯೋ ಪ್ರಕರಣಗಳು ವರದಿಯಾಗಿವೆ.

**ಮೈಸೂರು ಜಿಲ್ಲೆಯಲ್ಲಿ ಪೋಲಿಯೋ ಪ್ರಕರಣಗಳು**

೧೯೯೧ ರಲ್ಲಿ—೨೧

೧೯೯೨ ರಲ್ಲಿ—೧೫

೧೯೯೩ ರಲ್ಲಿ—೧೭

೧೯೯೪ ರಲ್ಲಿ—೬ ವರದಿಯಾಗಿವೆ.

ಕೇವಲ ೬ ಪೋಲಿಯೋ ಪ್ರಕರಣಗಳು ವರದಿಯಾಗಿವೆ ಎಂಬ ಸಮಾಧಾನ ಇದ್ದರೂ ಒಂದೇ ಒಂದು ಪ್ರಕರಣವಿದ್ದರೂ ಅದು ಸಾಂಕ್ರಾಮಿಕತೆಯೇ ಎಂಬ ಭಯವಿದೆ.

ಮೈಸೂರು ಜಿಲ್ಲೆಯ ಅಂದಾಜು ಮಕ್ಕಳ ಸಂಖ್ಯೆಯು

೦–೧ ವರ್ಷ (ಶೇ. ೩) ಅಂದರೆ ೧.೦೧ ಲಕ್ಷ

೧–೩ ವರ್ಷಗಳು (ಶೇ. ೫) ಅಂದರೆ ೧.೬೯ ಲಕ್ಷ

ಒಟ್ಟು ೦–೩ ವರ್ಷದವರು (ಶೇ. ೮) ೨.೭೦ ಲಕ್ಷ

ಮೇಲಿನ ಮೂರು ವರ್ಷದ ಹಾಗೂ ಅದಕ್ಕೂ ಒಳಪಟ್ಟ ಎಲ್ಲಾ ಮಕ್ಕಳಿಗೆ ಎರಡು ವರಸೆ ಪೋಲಿಯೋ ಲಸಿಕೆ ನೀಡಲು ಮೈಸೂರು ಜಿಲ್ಲೆಗೆ ಕೆಳಕಂಡ ದಿನಾಂಕಗಳನ್ನು ನಿಗದಿಗೊಳಿಸಿ ಸಾಮೂಹಿಕ ಪೋಲಿಯೋ ಚಿಕಿತ್ಸಾ ಕ್ರಮ ಹಮ್ಮಿ ಕೊಳ್ಳಲಾಗಿದೆ.

ಮೊದಲನೆ ವರಸೆಗೆ ಏಪ್ರಿಲ್ ೫, ೬ ಮತ್ತು ೭

ಎರಡನೇ ವರಸೆಗೆ ಮೇ ೫, ೬ ಮತ್ತು ೭

ವಿಶ್ವ ಆರೋಗ್ಯ ದಿನಾಚರಣೆ ಏಪ್ರಿಲ್ ೭ ರಂದು ಶೇಕಡ ೧೦೦ ರಷ್ಟು ಲಸಿಕಾ ನೀಡುವಿಕೆ, ಸದರಿ ದಿನದಂದು ನಡೆಯಲೇ

ಬೇಕೆಂಬ ದೃಷ್ಟಿಯಿಂದ ಮೇಲಿನ ದಿನಾಂಕಗಳನ್ನು ನಿಗದಿಗೊ ಲಾಗಿದೆ. ಸದುಪಯೋಗಪಡಿಸಿಕೊಳ್ಳುವ ಕರ್ತವ್ಯ ನಮ್ಮೆಲ್ಲರದು

ಚೀನಾ ದೇಶದಲ್ಲಿ ಕೇವಲ ೪೮ ಘಂಟೆ (೨ ದಿನ) ಗಳ ಅವಧಿಯಲ್ಲಿ ೮೦ ದಶಲಕ್ಷಕಕ್ಕೂ ಹೆಚ್ಚಿನ ಮಕ್ಕಳಿಗೆ ಪೋಲಿಯೋ ಲಸಿಕೆ ನೀಡಿ ಗುರಿ ಮುಟ್ಟಲು ಮುಂದಾಗಿದ್ದಾರೆ.

ಮೈಸೂರು ಜಿಲ್ಲೆಯೂ ೧೯೯೪-೯೫ನೇ ಸಾಲಿನಲ್ಲಿ ಪೋಲಿಯೋ ಪಿಡುಗನ್ನು ನಿರ್ಮೂಲನೆ ಮಾಡಲು ಗಮನಾರ್ಹ ಸಾಧನೆ ಮಾಡಿದೆ. ಅಲ್ಲದೆ ೧೯೯೫ರ ಮೊದಲ ಮೂರು ತಿಂಗಳ ಅವಧಿಯಲ್ಲಿ ಒಂದು ಪ್ರಕರಣವೂ ವರದಿಯಾಗಿಲ್ಲ ಎಂಬುದು ಸಂತೋಷದ ಸುದ್ದಿ.

ವಿಶ್ವದ ೨೧೩ ರಾಷ್ಟ್ರಗಳಲ್ಲಿ ಈಗ ೧೪೫ ರಾಷ್ಟ್ರಗಳು ಪೋಲಿಯೋ ರಹಿತವಾಗಿವೆ. ೧೪೬ನೇ ಪೋಲಿಯೋ ರಹಿತ ರಾಷ್ಟ್ರ ಭಾರತವಾಗಲು ನಾವೆಲ್ಲರೂ ಶ್ರಮಿಸೋಣ.

‘‘ಏಳು ಎದ್ದೇಳು ಗುರಿ ಮುಟ್ಟುವ ತನಕ ನಿಲ್ಲ ಬೇಡ’’ ಎಂದು ಸಾರಿದರು ಸ್ವಾಮಿ ವಿವೇಕಾನಂದರು.

ಆದ್ದರಿಂದ ಈಗ ನೀವು, ನಾವು, ಸರ್ವರೂ, ಸ್ವಾಮಿ ವಿವೇಕಾನಂದರ ವಾಣಿಯಂತೆ ಎಚ್ಚರಗೊಂಡು ೧೯೯೫ ವಿಶ್ವ ಆರೋಗ್ಯದಿನಾಚರಣೆಯ ಘೋಷಣೆ “೨೦೦೦ ಇಸವಿ ವೇಳೆಗೆ ಪೋಲಿಯೋ ರಹಿತ ವಿಶ್ವ” ಎಂಬ ಗುರಿ ಮುಟ್ಟಲು ಒಟ್ಟಾಗಿ ಸಹಕರಿಸಿ ಶ್ರಮಿಸೋಣ.

“ರಾಷ್ಟ್ರಗಳ ಆರೋಗ್ಯ ಅವುಗಳ ಐಶ್ವರ್ಯಕ್ಕಿಂತ ಮುಖ್ಯ ಎಂಬುದನ್ನು ಅರಿತು ಬಾಳೋಣ”.

ಕೆ.ಸಂ. ೫೨೧೯—ಎಂ ಯು.ಪಿ.ಎಂ—೫,೦೦೦ ಪ್ರತಿಗಳು—೧೦-೭-೯೫

ದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ

...ಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ

೩೨. ...ಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—
ದೇವಂಗಿ ಟಿ. ಚಂದ್ರಶೇಖರ

೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ

೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್

೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ

೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್

೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್

೩೯. ರಾಘವಾಂಕ—ಡಾ. ರಾಮೇಗೌಡ

೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ

೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್

೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ

೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ

೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೭. ಕಬೀರದಾಸ—ಡಾ. ಹಿರಣ್ಮಯ

೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ

೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ

೫೧. ಪೊನ್ನ—ಎನ್. ಅನಂತರಂಗಾಚಾರ್

೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ

೫೩. ದೇವರ ದಾಸಿಮಯ್ಯ—ಕೆ. ಅನಂತರಾಮು

೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ

೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ

೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ

೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ

೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ

೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ

೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ. ಪಿ.
ಕೃಷ್ಣಕುಮಾರ್

೬೧. ದುರ್ಗಸಿಂಹ—ಡಾ. ರಾಮೇಗೌಡ
೬೨. ಪಾಲ್ಕುರಿಕೆ ಸೋಮನಾಥ—ಡಾ. ಆರ್ವಿಯಸ್ ಸುಂದರಂ
೬೩. ಕನ್ನಡ ಸಾಹಿತ್ಯದ ಭಾಗವತ ಕವಿಗಳು—
ಬಿ. ಎಸ್. ವೇಣುಗೋಪಾ
೬೪. ಕುಮಾರ ವಾಲ್ಮೀಕಿ—ಡಾ. ಹೊಸಬೆಟ್ಟು ಸೀತಾರಾಮ ಆಚಾ
೬೫. ಕವಿರಾಜ ಮಾರ್ಗ—ಸೀತಾರಾಮ ಜಾಗೀರ್‌ದಾರ್
೬೬. ಪಾರ್ಶ್ವ ಪಂಡಿತ—ಬಿ. ನಂ. ಚಂದ್ರಯ್ಯ
೬೭. ವೃತ್ತವಿಲಾಸ—ಡಾ. ಕೆ. ರಾಘವೇಂದ್ರರಾವ್
೬೮. ಅಗ್ಗಳದೇವ—ಎಚ್. ಎನ್. ಕೃಷ್ಣಾಜೋಯಿಸ್
೬೯. ಕನಕದಾಸ—ಮಳಲಿ ವಸಂತಕುಮಾರ್
೭೦. ಶ್ರೀಪಾದರಾಜರು—ಡಾ. ಟಿ. ಎನ್. ನಾಗರತ್ನ
೭೧. ಸಿದ್ಧರಾಮ—ಡಾ. ಎಂ. ರಾಮಕೃಷ್ಣ
೭೨. ರನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೭೩. ಕನ್ನಡ ಕವಿಗಳು ಕಂಡ ಕ್ರೀಡೆಗಳು—ಡಾ. ಕೆ. ಶ್ರೀಕಂಠಯ್ಯ
೭೪. ಅಪರಾಧ ಪರಿಚಯ—ಆನಂದಮೂರ್ತಿ ಮಲಾಲಿ
೭೫. ಹೆಳವನಕಟ್ಟೆ ಗಿರಿಯಮ್ಮ—ಡಾ. ನಗುವನಹಳ್ಳಿ ಪಿ. ರತ್ನ
೭೬. ಯಜುರ್ವೇದ—ಸಿ. ಜಿ. ಪುರುಷೋತ್ತಮ
೭೭. ಎಂ.ಆರ್.ಶ್ರೀ.: ಬದುಕು-ಬರಹ—ಡಾ. ನಗುವನಹಳ್ಳಿ ಪಿ.
೭೮. ಶ್ರೀ ವಿಜಯದಾಸರು—ಡಾ ಎಸ್. ಕೆ. ರಾಮಶೇಷನ್